# ಮುನ್ನುಡಿ

ಕಾಲಕ್ಕೊಂದು ಕಣ್ಣು ಇದೆ. ಪ್ರಪಂಚವನ್ನೂ, ತನ್ನನ್ನೂ ನೋಡುವ ಈ ಕಣ್ಣು ಅಂದಿನಿಂದ ಇಂದಿಗೆ ಒಂದೇ ಆಗಿಲ್ಲ. ಹೀಗಿರಲು ಹೊಸ ದಿನದ ಕಣ್ಣು ಬೇರೆ, ಹಳೆ ದಿನದ ಕಣ್ಣು ಬೇರೆಂದು ಹೇಳಬೇಕೆ? ಈ ರೂಪಕದಲ್ಲಿ ಅಂಥ ಎರಡು ಕಣ್ಣುಗಳು ಒಂದೇ ವಸ್ತುವನ್ನು ನೋಡುತ್ತಿವೆ. ಎರಡೂ ಭಿನ್ನ ಅಭಿಪ್ರಾಯಗಳನ್ನು ಕಾಣುತ್ತಿವೆ. ಆದರೆ ದಿನದ ಜೀವನವನ್ನು ಪ್ರೇರಿಸುವ ಹಂಬಲವೆಲ್ಲ ಒಂದೇ ಎಂದು ಆ ಕಣ್ಣುಗಳಿಗೆ ತಿಳಿಯಲು, ನೋಟದ ವೈವಿಧ್ಯದಲ್ಲೂ ಜೀವನದ ಸಾರ್ಥಕತೆಯು ಏಕತೆಯನ್ನು ಅವು ಕಾಣುವುವು. ಇದನ್ನೆ ಇಲ್ಲಿ ಹೇಳಲು ಬಯಸಿದೆನು.

ಶಿವರಾಮ ಕಾರಂತ

## ಪಾತ್ರ ಪರಿಚಯ —

ಗೌರಕ್ಕ — ಊರಿಗೇ ಅಜ್ಜಿಯಾಗುವಷ್ಟು ಮುದಿ ಹೆಂಗಸು. (ವಿಧವೆ)

ವನಜ — ಆಕೆಯೂ ಮುದುಕಿಯೇ. (ವಿಧವೆ)

ಕನಕ — ಹೇಗೂ ಮುದುಕಿ. ಮಡಿವೈಲಿಗೆ, ಆಚಾರ, ನೀತಿಗಳ ವಿಷಯ ಶ್ರದ್ಧೆಯಲ್ಲಿ ಮುಳುಗಿದವಳು. (ಮುತ್ತೈದೆ)

ನಳಿನಿ— ಪತಿಯ ದುರಾಗ್ರಹಕ್ಕೆ ಬಲಿಯಾಗಿ ತ್ಯಜಿಸಲ್ಪಟ್ಟ ಕಿರಿಯ ಜೀವ.

ತಾರಿಣಿ — ನಳಿನಿಯ ತಂಗಿ. ಕಾಲೇಜನ್ನು ಸುತ್ತಿದವಳು. (ಕನ್ಯೆ)

ನಾಗಿಣಿ — ಅವಳು ಮೆಟ್ರಿಕ್ಕಿನಲ್ಲಿ ಓದುತ್ತಿದ್ದಾಳೆ. ಪತಿಯು ಚಿಕ್ಕ ವಯಸ್ಸಿನಲ್ಲಿ ತೀರಿಕೊಂಡುದರಿಂದ ಬರಿಯ ಓದು ಅವಳ ಕೆಲಸ.

# ದೃಷ್ಟಿ ಸಂಗಮ

[ಸ್ಥಳ: — ನಳಿನಿಯ ತಂದೆ ದೇವದಾಸಯ್ಯನವರ ಮನೆಯಿಂದ ತುಸು ಸಮೀಪವಲ್ಲಿರುವ ಬಾವಿಗೆ ಹೋಗುವ ಹಾದಿಯ ಬಳಿ. ಸೆಕೆಗಾಲ — ಊರಿನ ಬಾವಿಗಳೆಲ್ಲ ಬರಿದಾಗಿ ನೀರು ಅಮೃತವಾಗಿದೆ. ಎಲ್ಲರೂ ನೀರಿರುವ ಒಂದೇ ಒಂದು ಬಾವಿಯಾದ ದೇವಸ್ಥಾನದ ಬಾವಿಗೆ ಬರುತ್ತಾರೆ. ಅಲ್ಲಿಗೆ ಮುಸುರೆ ಪಾತ್ರೆ ತರುವವರು ಕೆಲವರು. ಬಟ್ಟೆಗಳನ್ನು ತಂದು ಒಗೆದುಕೊಂಡು ಹೋಗುವವರು ಕೆಲವರು. ಬರಿಯ ನೀರಿಗಾಗಿ ಬಂದು ಹೋಗುವವರು ಕೆಲವರು. ಈ ನಾಟಕದ ವ್ಯಕ್ತಿಗಳೆಲ್ಲರೂ ಬಾವಿಯ ನೀರಿಗೋ, ಸ್ನಾನಕ್ಕೋ ಬಂದುಹೋಗುವವರು ]

ವನಜ — ಅದು ಯಾರೇ ಕನಕ, ಗೌರಜ್ಜಿಯಲ್ಲವೇ? ನಾನೆನ್ನುತ್ತೇನೆ: ನಮ್ಮ ಗೌರಜ್ಜಿ ಒಂದು ದಿವಸ ಆ ಕೊಡಪಾನದ ಕೆಳಗೇ ಬಿದ್ದು ಸಾಯುತ್ತಾಳೆ. ಅವಳಿಗೆ ವರ್ಷ ನೂರಾಯಿತೋ, ನೂರಿಪ್ಪತ್ತಾಯಿತೋ . . . ಆದರೂ ಬಾವಿಯ ನೀರಿಗೆ ಬರುವುದನ್ನು ಬಿಡುವುದಿಲ್ಲ. ಈ ವಯಸ್ಸಿನಲ್ಲಾದರೂ ತೆಪ್ಪಗಿರಬಾರದೇ?

ಯಾಕೆ? ನಾಗಿಣಿಯನ್ನು ನೀರಿಗೆ ಕಳುಹಿಸಬಾರದೇ? ಮೊಮ್ಮಗಳು; ಕೈಕಾಲು ಗಟ್ಟಿಯಿದೆ; ನೀರು ಹೊತ್ತರೇನು ನಷ್ಟ?

ಕನಕ — ನಮ್ಮ ಗೌರಮ್ಮನ ಕೆಲಸ ಅದು ಅವಳು ಮಾಡಿದ ಕರ್ಮ ಅವಳಿಗೆ ಅಲ್ಲವಾದರೆ ಮೊಮ್ಮಗಳನ್ನು ಇಂಗ್ಲಿಷಿಗೆ ಯಾಕೆ ಹಾಕಬೇಕು? ಅದೂ ಅಲ್ಲದೆ—

ಓಲೆ ಭಾಗ್ಯ ಇಲ್ಲದವರು ಇಂಗ್ಲಿಷು ಕಲಿತು ಮಾಡು ವುದೇನು?

ವನಜ – ಹಾಗಲ್ಲವೇ ಕನಕ ಗೌರಜ್ಜಿಗೆ ಈ ಮಗನ ಮಗಳು ಅಂದರೆ ಜೀವ ಅವಳ ಹಣೆಯ ಭಾಗ್ಯ ಅಳಿಸಿ ತೆಂದು ಅವಳು ಕರೆದ ಕಣ್ಣೀರನ್ನು ಕೂಡಿಸಿದರೆ, ಆರು ಕೆರೆ ಗಳಾದಾವು! ಏನೋ ಅವಳ ಮನಸ್ಸಿಗೆ ಬಂತು: ಮೊಮ್ಮ ಗಳನ್ನು ಇಷ್ಟು ದಣಿಸಿದ್ದು ಸಾಕು, ಇನ್ನು ದಣಿಸುವುದು ಬೇಡ—ಎಂದು.

ಕನಕ — ದಣಿಸುವುದು ಬೇಡವಾದರೆ ಮನೆಯಲ್ಲಿ ಕುಳಿ ತಿರಲಿ, ಇಂಗ್ಲಿಷ್ ಬೇಕೆ? ಅಲ್ಲ—ವನಜಾಕ್ಷಿ, ನಿನಗೂ ಭ್ರಮೆಯೇ? ಈ ಅಜ್ಜಿಯೇನು ಶಾಶ್ವತವೇ . . . ಇವಳು ಕಣ್ಮುಚ್ಚಿದ ಮೇಲಾದರೂ ಆ ನಾಗಿಣಿ ನೀರಿನ ಕೊಡ ಹಿಡಿಯಬೇಡವೇ?

ವನಜ – ಬೇಡ ಸುಮ್ಮನಿರು. ಗೌರಜ್ಜಿಗೆ ದೃಷ್ಟಿ ಮಂದವಾದರೂ, ಕಿವಿ ಚುರುಕಾಗಿದೆ.

[ಗೌರಜ್ಜಿ ಬರುವಳು. ಅವಳನ್ನು ಕಂಡರೆ 60 ವರುಷಕ್ಕೆ ಮಿಕ್ಕಿದಂತಿಲ್ಲ.]

ಗೌರಜ್ಜಿ, ಮೊಮ್ಮಗಳು ಬರಲಿಲ್ಲವೇ ಮನೆಗೆ? ಬೇಸಿ ಗೆಗೆ ರಜೆ ಉಂಟಂತಲ್ಲ. ಪಾಪ, ತ್ರಾಣದ ಮಕ್ಕಳು ಮೊಮ್ಮ ಕ್ಕಳು ಮನೆಯಲ್ಲಿರುತ್ತ, ನೀನು ಹೀಗೆ ನೀರು ಹೊರುತ್ತಾ ನಡೆಯುವುದೆಂದರೆ ನನಗ್ಯಾಕೊ . . .

ಗೌರಜ್ಜಿ – ಯಾರು ವನಜಾಕ್ಷಿಯೇ? ಕನಕಮ್ಮ!

ನನಗೆ ನನ್ನ ಕನಕನ್ನ ಕಂಡರೆ ಹಾಲುಬಾಯಿ ತಿಂದಷ್ಟು ಸಂತೋಷ. ಅವಳು ಮಾಡಿದಷ್ಟು ಮಡಿ ಮೈಲಿಗೆ, ಶುದ್ಧಾಚಾರ ನನ್ನಿಂದ ಸಹ ಆಗುವುದಿಲ್ಲ. ನಾನೂ ಸಹ ಮಿಂಯುತ್ತೇನೆ. ದಿನಕ್ಕೆ ಮೂರು ಸಾರಿ ಮಿಂಯುತ್ತೇನೆ. ಆದರೂ ಅಲ್ಲಿ ಇಲ್ಲಿ ಮೈಲಿಗೆ ತಾಗಿಯೇ ತಾಗುತ್ತೆ.

ಈಗಂತು ನಮ್ಮ ನಾಗಮ್ಮ ಬಂದಿದ್ದಾಳೆ. ಅದನ್ನೇ ನೀನು ಕೇಳಿದಿಯಲ್ಲ, ಬಂದಿದ್ದಾಳೋ ಎಂದು. ಅಹುದು, ಬಂದಿದ್ದಾಳೆ. ಅವಳಿಗೆ, ಪಾಪ ಸಣ್ಣವಳು, ಮಡಿಯಿಲ್ಲ, ಮೈಲಿಗೆಯಿಲ್ಲ. 'ಅಜ್ಜಿ, ಅಜ್ಜಿ' ಎಂದು ನೂರು ಸಾರಿ ಮೈಮುಟ್ಟಿ ಮಾತನಾಡಿಸಬೇಕು. ಮುಟ್ಟಿದಾಗಲೆಲ್ಲ ಮೂಗುಮುಚ್ಚಿ ಮಿಂದು ಪೂರೈಸೀತೆ?

ಕನಕ — ಅಲ್ಲ ಗೌರಜ್ಜಿ, ನಿನ್ನ ಮೊಮ್ಮಗಳ ವಿಷಯ ಅನ್ನುತ್ತೇವೆ ಅಂತ ಸಿಟ್ಟುಮಾಡಬೇಡ ನಾಳೆ ನಾಗುವನ್ನು ಏನು ಮಾಡುವ ಯೋಚನೆ ನಿನಗೆ? ಮಡಿಯಿಲ್ಲ, ಮೈಲಿಗೆಯಿಲ್ಲ ಎಂದು ಹೇಳುತೀಯಾ? ನೀನು, ನಾನು, ಈ ವನಜ– ನಮಗೆಲ್ಲ ಇನ್ನು ನೀರಿನ ಋಣ ಎಷ್ಟು ದಿವಸ ಇದೆ ಎಂದು ತಿಳಿಯುತ್ತೀ? ಹಾಗೊಂದು ದಿವಸ ನೀನು ಕಣ್ಮುಚ್ಚಿದರೆ— ನಿನ್ನ ನಾಗು ದಿವಸ ಹೀಗೆಯೇ ಮುಂದೆ ಸಾಗೀತೆ? ಹೆಣ್ಮಕ್ಕಳಾದವರಿಗೆ ಮಡಿಮೈಲಿಗೆಯೊಂದೂ ಬೇಡವೇ? ಅದರಲ್ಲೂ– ಪಾಪದ ನಾಗಮ್ಮ; ನೆನೆದುಕೊಂಡರೆ ಕಣ್ಣೀರು ಬರುತ್ತೆ, ಅವಳನ್ನು ನೀನು ಹೀಗೆ ಬೆಳೆಸಿದರೆ ಹೇಗೆ?

ಗೌರ — ಏನೋ ಮಗು, ನನಗೆ ಆದೊಂದೂ ತಿಳಿ

ಯುದು. ನನ್ನ ಮಗನೆಂದ: 'ಅಜ್ಜಿ, ನಾಗೂನ ಇಂಗ್ಲಿಷಿಗೆ ಕಳುಹಿಸುತ್ತೇನೆ, ಎಂದ. ಅಲ್ಲೆಲ್ಲೋ ಒಂದು ಆಶ್ರಮವಂತೆ. ಅಲ್ಲಿಗೆ ಕಳುಹಿಸಿದ. ಈಗ ಇಂಗ್ಲಿಷು ಓದುತ್ತಾಳೆ. ಅದಕ್ಕೂ ಹೆಚ್ಚು ನಾನೆಲ್ಲಿ ಕೇಳಲಿಕ್ಕೆ ಹೋಗುತ್ತೇನೆ? ನನಗೆ ಅನಿಸಿತು: ಇಂಗ್ಲಿಷಾಗಲಿ, ಪಂಗ್ಲಿಷಾಗಲಿ ಮಗು ಚಿಂತೆ ಮರೆತು ಬದುಕಿದರೆ ಸಾಕು ಎಂದು . . .

ವನಜಾ, ನಿನ್ನ ಹಣೆಬರಹ ಏನು? ನಮ್ಮದು ಏನು? ಗೊತ್ತಿದ್ದದ್ದೆ ಅಲ್ಲವೇ? ಕುಂಕುಮ ಅಳಿಸಿದ ಮರುದಿವಸ ಕತ್ತರಿಯಾಗಿ ಬೀಳಲಿಲ್ಲವೆ! ಹೇಗೂ ಇರಲಿ, ನಾನು ಬದುಕಿರುವಷ್ಟು ದಿವಸ ನಾಗು ನಗುತ್ತಿರಲಿ!

ವನಜ— ನನಗೆ ಆ ಹೊಟ್ಟೆಸಂಕಟ ಇಲ್ಲ ಅನ್ನುತ್ತೀಯಾ ಗೌರಜ್ಜಿ? ಇದೆ. ಆದರೇನು ಮಾಡುವುದು? ಯಾವ ಪಾಪಮಾಡಿ ಹೆಣ್ಣು ಜನ್ಮ ಬಂದಿತೋ, ಬಂತು. ಅದರಲ್ಲೂ ಈ ಪಾಪಿ ಜನ್ಮ. ಬಂದ ಮೇಲೆ ಅನುಭವಿಸುವುದಲ್ಲವೇ . . . . .

ನನ್ನ ಹೆದರಿಕೆ ಅದಲ್ಲ, ಇಂಗ್ಲಿಷು ಪಂಗ್ಲಿಷು ಅಂತ ಏನಾದರೂ ಕುಲಕ್ಕೆ ಮರ್ಯಾದೆ ತಂದರೆ, ಏನು ಮಾಡಿ ಏನು ಆದ ಹಾಗಾಯಿತು?

ವನಜ —ಅದು ಹೌದಕ್ಕ. ನೀನು ಕೇಳಿಲ್ಲವೇ . . . ದೇವದಾಸಯ್ಯನ ಮಕ್ಕಳ ವಿಚಾರ! ಹಿರಿಯವಳು ಆಯಿತಲ್ಲ —ಇಂಗ್ಲಿಷ್ ಓದಿ ಗಂಡನನ್ನು ಗಡಿಪಾರು ಮಾಡಿದಳು. ಕಿರಿಯವಳು ಅಂತಾಳಂತೆ – 'ತನಗೆ ಗಂಡನೇ

ಬೇಡ' ಎಂದು. ವರ್ಷ ಆಯಿತು ಹದಿನೆಂಟು. ಹದಿನೆಂಟಕ್ಕೆ ಮದುವೆ ಬೇಡ ಅಂದರೆ, ಒಂದೂ ಮಠದ ದಂಡಕಮಂಡಲು ಹಿಡಿಯುವ ಯೋಚನೆ; ಇಲ್ಲವೆ—ಇಲ್ಲವೆ ನಮ್ಮ ಬೀಸಣಿಗೆ ಚನ್ನಕ್ಕನ ಹಾಗೆ ಗೆಜ್ಜೆ ಕಟ್ಟುವ ಯೋಚನೆ.

ಕನಕ—ಗೆಜ್ಜೆ ಕಟ್ಟಬೇಕು ಅಂದರೇನು? ಕಟ್ಟಿಯಾಯಿತು. ನೀನು ತಾರಿಣಿ ಸುದ್ದಿಯನ್ನು ಹೇಳಿದ್ದಿಲ್ಲವೆ? ಅವಳೂ ಅಷ್ಟೆ, ಅವಳ ಅಕ್ಕನೂ ಅಷ್ಟೆ. ಅವರ ಕುಲವೇ ಅಂಥದು. ತಾರಿಣಿ ತಾಯಿ ದೇವದಾಸಯ್ಯನನ್ನು ಮಾರ ದಿದ್ದದ್ದು ದೊಡ್ಡದು.

ಈ ಇಬ್ಬರೂ ಅಕ್ಕಂದಿರು, ಇಂಗ್ಲಿಷು ಅಂತ ಹೇಳಿ ಮಂಗಳೂರಿನಲ್ಲಿ ಬಿರುಗಾಳಿಯ ಹಾಗೆ ಬೀದಿಯಲ್ಲೆಲ್ಲ ಬೀಸುತ್ತಿರುತ್ತಾರಂತೆ. ನನಗೆ ಯಾರೋ ಹೇಳಿದರು ಹಾಗೆಂದು ನಿನ್ನೆಯೋ ಮೊನ್ನೆಯೋ ಇಲ್ಲಿಗೆ ಬಾವಿಗೂ ಬಂದಿತ್ತು ಸವಾರಿ. ಅವಳಿಗೆ ಗಂಡ ಬಿಟ್ಟಿದ್ದಾನೆ ಎಂಬ ಚಿಂತೆಯಿಲ್ಲ; ಇವಳಿಗೆ ಗಂಡ ಬರಲಿಲ್ಲ ಎಂಬ ಚಿಂತೆಯಿಲ್ಲ.

ವನಜ—ಹೌದಕ್ಕ, ಅದೇನು ಬೀಸಾಣಿಕೆ! ಇವರ ಮುಂದೆ ಬಸೂರಿನ ಗೆಜ್ಜೆ ಕಟ್ಟುವವರೂ ಹಿಂದೆ. ಅಯ್ಯೋ ಆ ತಲೆಯೋ! ಆ ನೆರಿಗೆಯೋ! ಕೈಯಿಲ್ಲದ ರವಕೆಯೋ?

ಕನಕ—ಅದೆಲ್ಲ ವೇಷ ಕಂಡರೆ ನನ್ನ ಹೊಟ್ಟೆಗೆ ಬೆಂಕಿ ಬಿದ್ದ ಹಾಗೆ ಆಗುತ್ತೆ! ನನಗೆ ಒಂದೂ ತಿಳಿಯುವುದಿಲ್ಲ ವನಜ. ನನಗೆ ಇಷ್ಟು ವರ್ಷ ಆಯಿತು—ಹಣೆಗೆ ಇಷ್ಟು ಕುಂಕುಮ, ಕಣ್ಣಿಗಿಷ್ಟು ಕಾಡಿಗೆ, ಕೌಳಿಗಿಷ್ಟು ಅರಿಸಿನ

ಹಚ್ಚದಿದ್ದರೆ ಆ ದಿನ ಬೆಳಗಾದ ಹಾಗೆ ಕಾಣು ವುದಿಲ್ಲ . . .

ಇದು ಶಾಲೆ ಮಕ್ಕಳ ನಾಟಕದ ವೇಷಕ್ಕಿಂತ ಕಡೆ! ಆ ಇಲ್ಕಲು, ಕೊನ್ರಾಡು ಸೀರೆ ಹಾರಿಯೋ ಹೋದುವಲ್ಲ. ಆ ದಿನ ನಮ್ಮ ಮನೆಗೆ ತಹಶಿಲ್ದಾರರು ಬಂದರಲ್ಲ, ಅವರ ಮಂಚದ ನುಸಿ ಪರದೆ ಹಾಗಿದ್ದ ಸೀರೆ!

ಮುಖತುಂಬ ಬೂದಿಯಪ್ಪ. ಇನ್ನು ಗಳಿಗೆಗೆ ಆರು ಸಾರಿ ಕನ್ನಡಿ ನೋಡುವುದು. ಈ ಬೂದಿ ಬಡಿದುಕೊಳ್ಳುವುದು. ಮಂಗಳೂರಲ್ಲಂತೆ—ಹೆಣ್ಣುಮಕ್ಕಳು, ನಮ್ಮ ಆಟದ ವೇಷದ ಹಾಗೆ ತುಟಿಗೆ, ಹುಬ್ಬಿಗೆ ಎಲ್ಲ ಬಣ್ಣ ಸವರುತಾರಂತೆ. ನಾನು ಮೊದಲು ಮೊದಲು ಸುಳ್ಳಂತಲೇ ತಿಳಿದಿದ್ದೆ. ನಿನ್ನೆ ಆ ತಾರಿಣಿ ಮುಖದ ಮೇಲೆ ಸಾಪಾಗಿ ಬೂದಿಯಿತ್ತು. ಬಣ್ಣವೂ ಇತ್ತು . . . ಇನ್ನು ಗಂಡು ಮಕ್ಕಳ ಹಾಗೆ ಕ್ರಾಪು ಮಾಡಿದರೆ ಆಯಿತು.

ಗೌರ—ಕನಕಮ್ಮ, ನಿನಗೆ ಇಲ್ಲದ ಮಾತಕ್ಕ. ಮಕ್ಕಳು ಎಂಬುವಕ್ಕೇ ಹಾಗೆ. ಏನೋ ಕುಣಿಯುವ ಆಸೆಯಾಗುತ್ತೆ. ಕುಣಿತ್ತಾವೆ. ನಮ್ಮ ನಿಮ್ಮ ಹಾಗೆ ಕೆನ್ನೆಗೆ ನೆರಿಗೆ ಬಂದ ಮೇಲೆ ಕುಣಿಯುತ್ತಾವೆಯೇ?

ಕನಕ—ಹಾಗೆಂದರೆ, ಕುಂಕುಮ ಅರಿಸಿನ ಬೇಡ ಅಂತಲೇ?

ಗೌರ—ನಿಮ್ಮ ಕಣ್ಣಿಗೆ ಅದು ಚಂದ. ಇವಕ್ಕೆ ಇದು ಚಂದ! ನಾವೆಲ್ಲ ಸಣ್ಣದಿರುವಾಗ ಅರ್ಧ ಸೇರು ಅರಿಸಿನ,

ಪಂಥೀರು ಕಾಡಿಗೆ, ಮಣ ಕುಂಕುಮ ಖರ್ಚು ಮಾಡಿಲ್ಲವೆ? ಮುಖ ಕುರೂಪ ಆಗಲಿ ಅಂತ ಹಾಗೆ ಮಾಡಿದೆವೆ? ಚಂದ ಆಗಲಿ ಎಂದಲ್ಲವೆ ಇವ್ರೂ ಚಂದ ಆಗಲಿಕ್ಕೆ ಪಡುತ್ತಾವೆ ಕಷ್ಟ. ಚಂದವೂ ಆಗುತ್ತೆ, ಸ್ವಲ್ಪ ವಿಪರೀತವೂ ಆಗುತ್ತೆ.

ಕನಕ – ವಿಪರೀತ ಆಗುವುದು ಇನ್ನು ಉಳಿದಿಲ್ಲ, ಅಜ್ಜಿ. ಆ ತಾರಿಣಿ, ನಳಿನಿಯರ ಸುದ್ದಿ ಕೇಳಿದರೆ ಕಿವಿಗೆ ಸೀಸ ಕರಗಿಸಿ ಹುಯ್ಯಬೇಕು ಅನಿಸುತ್ತೆ! "ಇದು ಅಂಕೆ ಇಲ್ಲದ ಕಪಿ ಲಂಕೆ ಸುಟ್ಟಿತು" ಅಂದ ಹಾಗೆ – ಏನೇನೊ . .

ವನಜ – ನಮಗೇನು? ನಾಳೆದಿನ ದೇವದಾಸಯ್ಯನಿಗೆ ತಿಳಿದೀತು: ಅಳಿಯನನ್ನು ಹುಡುಕುವುದು ಕಷ್ಟವಾದರೆ ತನ್ನಂತೆಯೋ ಬುದ್ಧಿ ಬರುತ್ತೆ.

ಗೌರ – ವನಜ, ನಿನಗೆ ಜನರ ರೀತಿ ಗೊತ್ತಿಲ್ಲ. ನಮ್ಮ ಗಂಡಸರಿಗೂ ಬುದ್ಧಿಯಿಲ್ಲ. ತಮಗೆ ಏನು ಬೇಕೆಂದು ಅವರಿಗೇ ಗೊತ್ತಿಲ್ಲ. ಮೊನ್ನೆ ನಿನ್ನ ಅಕ್ಕನೋ ತಂಗಿಯೋ – ಆ ಲಕ್ಷ್ಮಿ ನಿನಗೇನಾಗಬೇಕು? ಅವಳ ಮಗಳಿಗೆ ನೆಂಟಸ್ತಿಕೆ ನೋಡಲಿಕ್ಕೆ ಬಂದರಲ್ಲ? ಏನಾಯಿತು?

ಕನಕ – ಏನಾಯಿತೇ? ವನಜ, ಕೇಳಬೇಕು, ಕೇಳಬೇಕು ಅಂತಿದ್ದೆ; ಮರೆತೇ ಹೋಯಿತು! ಜಾತಕ ಗೀತಕ ಚೆನ್ನಾಗಿ ಕೂಡುತ್ತೆ ಎಂದಿದ್ದಿಯಲ್ಲ?

ವನಜ – ಜಾತಕ ಕೂಡಿದರೆ ಆಯಿತೇ, ಗ್ರಹಚಾರ ಕೂಡಬೇಕೇ?

ಕನಕ -- ಹಾಗೆಂದರೆ ಆ ಸೆಂಟಸ್ಸ್ರಿಕೆ ಹೊಂದಲೇ ಇಲ್ಲವೇ? ಚಿಸ್ನ ಗಿಸ್ನ ಬಹಳ ಕೇಳಿದರೇನು?

ವನಜ – ಹಾಗೊಂದೂ ಆಗಲಿಲ್ಲ. ಬಂದರು; ಹುಡುಗನೂ ಅವನ ಅಪ್ಪನೂ ಇಬ್ಬರೂ ಬಂದಿದ್ದರು. ಕಾಫಿ ಗೀಫಿಯಾಯಿತು. ನಾನಂತು ಆ ದಿವಸ, ಬೆಳಗಿನ ಜಾವಕ್ಕೆ ಎದ್ದು, ಹಾಲು ಕರೆದು, ತಂಗಿಯ ಮನೆಗೆ ಹೋದೆ. ಅಂದರೆ ಅವರಲ್ಲಿ ಹಾಲಿಲ್ಲ ಕನಕ. ಹಾಲಿಲ್ಲದೆ ಕಾಫಿ ಕೆಡಬಾರದು ಎಂದು ಹೋದೆ.

ಕಾಫಿ ಗೀಫಿ ಕುಡಿದರು. ನನ್ನ ತಂಗಿ ಮಗುವಿನ ಕೈಯಲ್ಲಿ ಉಪ್ಪಿಟ್ಟು ಇರಿಸಿ 'ಕೊಡು' ಎಂದರು. ಅವಳಿಗೂ ಏನೂ ತಿಳಿಯದು. ಇರಿಸಿದಳು; ಬಂದಳು.

ಸೈ, ನಂತರು, ನಂತರಲ್ಲ—ಆಗಬೇಕಾದ ನಂತರು ಮನೆಗೆ ಹಿಂದಕ್ಕೆ ಹೋಗಿ "ಹುಡುಗನಿಗೆ ಹುಡುಗಿ ಕಾಯಿಸ್ ಆಗಿಲ್ಲ" ಎಂದು ಕಾಗದ ಬರೆದರಂತೆ. ಏನು ಕಾಯಿಸೋ, ಏನು ಪಾಯಿಸೋ. ಇನ್ನು ಅವರಿಗೆ ಸರಿಯಾದ ಜೋಡಿ ಸಿಗಬೇಕಾದರೆ ಕುಳ್ಕುಂದದ ಜಾತ್ರೆಗೆ ಹೋಗಬೇಕು.

ಕನಕ— ಏನು, ಕಾಯಿಸು ಆಗಿಲ್ಲ ಅಂದರೆ! ನಿಮ್ಮ ಲಕ್ಷ್ಮಿ ಮಗಳಿಗೆ— ಜಾನಕಿಯಲ್ಲವೆ ಅವಳ ಹೆಸರು -- ಜಾನಕಿಗೆ ಕಣ್ಣಿಲ್ಲವೇ? ಕಾಲಿಲ್ಲವೆ? ಯಾವುದು ಊನ? ಬಣ್ಣ ಸ್ವಲ್ಪ ಎಣ್ಣೆಗಪ್ಪು; ಅದರಿಂದೇನು?

ವನಜ – ಅವರ ಹುಡುಗನೂ ಅಷ್ಟು ಬೆಳ್ಳಗಿಲ್ಲ. ಅಂತು ಅವರು ಹೇಳುತ್ತಾರಂತೆ: "ಹುಡುಗಿ ಓದಿದ್ದು

ಸಾಲದು; ಕಿಸೆಯಲ್ಲಿ ತುರುಕಿಕೊಳ್ಳುವಷ್ಟು ಸಣ್ಣದಾಯಿತು" ಎಂದು.

ಕನಕ — ಹಾ! ಹದಿನಾಲ್ಕು ವರ್ಷದ ಜಾನಕಿ ಕಿಸೆಯಲ್ಲಿ ತುರುಕಲಿಕ್ಕಾಯಿತೇ? ಅವನ ಅಂಗಿಯು ಚೀಲ, ಸಂತೆಯಲ್ಲಿ ಮುಂಡಕ್ಕಿ ತರುವ ಚೀಲಕ್ಕಿಂತ ದೊಡ್ಡದಿರಬೇಕು. ಇನ್ನು ಓದಿದ್ದು ಸಾಲದೇನು? ಅವಳು ಊರಲ್ಲಿ ಒಂದನೆಯೋ ಎರಡನೆಯೋ ಓದಿದ್ದಾಳಂತಲ್ಲ . . . . . ಅದು ಸಾಲದೇ? ನಾನೆನ್ನುತ್ತೇನೆ ಕಾಲಗತಿಯೇ ಬೇರೆಯಾಗಿದೆ.

ಗೌರ — ಕಾಲಗತಿ ಬೇರೆ ಎಂಬುದನ್ನು ಮಾತ್ರ ಮರೆಯುತ್ತೀ ಕನಕ, ನೀನು! ನಮ್ಮ ಕಾಲದಲ್ಲಿ ಓದೂ ಬೇಡ, ಬಣ್ಣವೂ ಬೇಡ, ಚಿನ್ನವೋ ಆಸ್ತಿಯೋ ಇದ್ದರೆ ಹೆಣ್ಣು ಕೊಡುವವರು ಸಾವಿರ ಜನರು ಇದ್ದರು.

ಕನಕ — ಹೌದಜ್ಜಿ, ಹೀಗೆಲ್ಲ ಸ್ವಯಂವರ ಇದ್ದಿಲ್ಲ. ಇದು ಸ್ವಯಂವರದ ಹಾಗೇ ಬಂತಲ್ಲ ಕಾಲ! ಬಿಲ್ಲು ಬಗ್ಗಿಸಿ ಮತ್ಸಲಾಂಛನ ಮುರಿಯುತ್ತಾರಲ್ಲ, ಅದು ಒಂದು ಮಾತ್ರ ಬಾಕಿ.

ಗೌರ – ಅದೂ ಒಂದು ಕಾಲಕ್ಕೆ ಚಂದವಾಗಿತ್ತು.

ಕನಕ — ಸುಡಲಿ ಆ ಚಂದವನ್ನು ಹುಡುಗಿ ಚಿಕ್ಕದಾದರೆ ಇವರು ಕಿಸೆಯಲ್ಲಿ ತುರುಕುತ್ತಾರಂತೆ ಮಾವಿನ ಮಿಡಿಯ ಹಾಗೆ. ದೊಡ್ಡದಾದರೆ ಇವರ ಗತಿಯೇನು! ಈ ಗಂಡಂದಿರನ್ನು ಆ ದೊಡ್ಡ ಸೂಟೆಗಳು, ತುರುಬಿಗೆ ಹೂವಿನ ಹಾಗೆ ಸಿಕ್ಕಿಸಿಕೊಳ್ಳುವುದಿಲ್ಲವೇ?

ವನಜ — ನಳಿನಿಗೆ ಆದದ್ದೇನು? ಗಂಡಬಿಟ್ಟ ಎಂದರೆ – ಸುಮ್ಮನೆ ಬಿಡಲಿಲ್ಲ! ಇವಳ ಇಂಗ್ಲಿಷು, ಮಾತು, ಷೋಕು ಹೆಚ್ಚಾಯಿತು ತಾನೇ ಗಂಡು, ಅವನೇ ಹೆಣ್ಣು ಅನ್ನುವುದು ಮಾತ್ರ ಬಾಕಿಯಿತ್ತು. ಇದು ಪೂರೈಸುವ ಬಾಬಲ್ಲ ಎಂದು ತಣ್ಣಗೆ ಮಾವನ ಮನೆಗೆ ಕಳುಹಿಸಿದ. ಆ ಮೇಲೆ ಕರೆಯಿಸಿಕೊಳ್ಳಲಿಲ್ಲ.

ಕನಕ - ಅವನು ಕರೆಯಿಸದಿದ್ದರೆ ಹೋಗಲಿ. ಇವರು ಕಳುಹಿಸಿ, "ದಮ್ಮಯ್ಯ ಮಹಾರಾಯ, ಅವಳಿಗೆ ಬುದ್ಧಿಯಿಲ್ಲ. ಸುಧಾರಿಸಿಕೊಂಡು ಹೋಗು" ಅನ್ನಬಾರದೇ?

ವನಜ- ದೇವದಾಸಯ್ಯ ಹಾಗೆಂದರೆ ಸಾಕೇ? ಈ ನಳಿನಿ ಹೋಗಲಿಕ್ಕೆ ಒಪ್ಪಬೇಕೇ? 'ಅಲ್ಲಿಗೆ ಕಳುಹಿಸುವುದರ ಬದಲಿಗೆ, ನನ್ನನ್ನು ಬಾವಿಗೆ ತಳ್ಳಿ' ಎಂದಳಂತೆ!

ಕನಕ — ಅಬ್ಬಾ, ದಿಟ್ಟೇ!

ಗೌರ — ಕನಕ, ಯಾಕೆ ಹೀಗೆ ಬಾಯಿ ಮುಂದಕ್ಕೆ ಮಾಡುತ್ತೀ? ಗಂಡನು ಹೆಂಡತಿಯ ಜೀವ ತಿಂದರೆ ಅವಳೇನು ಮಾಡುವುದು?

ಕನಕ — ಹಾಗೆಲ್ಲ ಜೀವ ತಿಂದಾನು ಎಂದು ನಾನು ನಂಬುವುದಿಲ್ಲ ತಿಂದರೂ ಕೈಹಿಡಿದ ಗಂಡನಲ್ಲವೇ? ಅಗ್ನಿ ಮುಂದೆ ಇವಳು ಅವನ ಸೆರಗನ್ನು ಹಿಡಿದು, ಏಳು ಹೆಜ್ಜೆ ಇಟ್ಟಿಲ್ಲವೆ? ಇಟ್ಟ ಮೇಲೆ, ಅವನ ಹೆಂಡತಿಯಾದ ಮೇಲೆ, ಅವ ಹೇಳಿದ ಹಾಗೆ ಬಾಳಿ, ಮಾನ ಉಳಿಸಿಕೊಂಡು, ಅಲ್ಲಿ ಬಿದ್ದಿರುವ ಬದಲು ಹೀಗೆ ಬಸವಿಯಾಗಿ ತಿರುಗುವುದೇ?

ಗೌರ—ಕನಕ, ಯಾಕೋ ನಿನ್ನ ಬಾಯಿ ನನ್ನನ್ನು ರೇಗಿಸುತ್ತೆ. ಬಸವೆ ಗಿಸವೆ ಅನ್ನಬೇಡ! ಯಾರ ಹಣೆಯು ಮೇಲೆ ಏನು ಬರೆದಿದೆಯೋ. ಆ ಹುಡುಗ, ದೇವ ದಾಸಯ್ಯನ ಅಳಿಯು ನಮ್ಮ ಊರವನಲ್ಲವೇ? ಅವನ ಹಣೆ ಬರಹ ನನಗೆ ಗೊತ್ತು.

ಅದು ಯಾಕೆ ಈಗ? ಕನಕ, ನಿನ್ನ ಮೊಮ್ಮಗಳು ಏನು ಸುಖಪಡುತಿದ್ದಾಳೆ ಹೇಳು, ಗಂಡನ ಮನೆಯಲ್ಲಿ?

ಕನಕ—ಗೌರಜ್ಜಿ, ನನ್ನ ಮೊಮ್ಮಗಳ ಸುದ್ದಿ ಮಾತಾಡ ಬೇಡ. ನಾನು ಎಲ್ಲಾ ಯೋಚನೆ ಬಿಟ್ಟುಬಿಟ್ಟದ್ದೇನೆ. ನನ್ನ ಮಗಳಿಗೆ, ಮಗಳು ಹುಟ್ಟದ್ದೂ ನಿಜ—ನಾವೆಲ್ಲ ಸೇರಿ ಅವಳನ್ನು ಒಂದು ಬಾವಿಗೆ ತಳ್ಳಿದ್ದೂ ಸಮ. ಅದೇನೋ ಆಯಿತು. ಉಳಿದದ್ದು ಅನುಭವಿಸುವುದು ಮಾತ್ರ.

ಗೌರ—ಯಾರು ಅನುಭವಿಸುವುದು?

ಕನಕ—ಯಾರು? ಅವಳು. ಅವಳಪ್ಪ, ಅಮ್ಮ—ಈ ಗತಿಗೋತ್ರವಿಲ್ಲದ ಕನಕ.

ಗೌರ—ಗತಿಗೋತ್ರವಿಲ್ಲದ ನಾನೂ ನೀನೂ ಬಾವಿಗೆ ಬಿದ್ದರೂ ದೊಡ್ಡದಲ್ಲ. ನೀನು ಅನ್ನುತ್ತಿ, ನಾಳೆಗೆ ಸಾಯುತ್ತಿ—ಎಂದು. ಇವತ್ತು ಸಾಯುವ ಅಂದರೂ ತಯಾರೇ. ಕಾಶಿ, ರಾಮೇಶ್ವರಗಳನ್ನೆಲ್ಲಾ ಸುತ್ತಿಬಂದೆ. ನಿನಗೆ ಆಶೆ, ಪಾಶ ಏನಿದೆ?

ನಿನ್ನ ಮೊಮ್ಮಗಳು ಹಾಗೇನು? ಇನ್ನೂ ಹದಿನಾರು ವರ್ಷವಷ್ಟೆ. ತಿನ್ನಬೇಕು, ಮುಡಿಯಬೇಕು, ಉಡಬೇಕು

ಎಂಬುದು ಸಹಜ ಅಲ್ಲವೇ? ಅವಳ ಗಂಡನೂ ಅತ್ತೆಯೂ ಸೇರಿ, ನಾಯಿಗಿಂತ ಕಡೆಯಾಗಿ ಕೆಲಸವಮಾಡಿಸಿ, ನೀನು ತಾನು ಎಂದು ಬೈದು ಗೋಳಿಡಿಸುತ್ತಾರಲ್ಲ--ಇದಕ್ಕಿಂತ ಮದುವೆ ಆಗದೇ ಇದ್ದರೆ ಏನು ನಷ್ಟ ಹೇಳು? ಕುಂಕುಮ ಹೋದರೇನು ನಷ್ಟ ಹೇಳು.

ಕನಕ— ಅಲ್ಲ, ಯಾರೇನು ಮಾಡಿಯಾರು? ಹಿಂದಿನ ಜನ್ಮದ ಪಾಪ!

ಗೌರಕ್ಕ - ಹಿಂದಿನ ಜನ್ಮದ ಪಾಪ ನಿನಗೆ, ನನಗೆ. ಪಾತಿ ವ್ರತ್ಯದ ಪಾರಾಯಣ ನಿನಗೆ, ನನಗೆ. ಆ ನರಳುವ ಮಗುವಿ ಗೇನು ಗೊತ್ತಾಗುತ್ತೆ? ಅದೆಷ್ಟು ಕಣ್ಣೀರನ್ನು ಅಲ್ಲಿ ಸುರಿಸುವು ದಿಲ್ಲ! ಅವಳಿಗೆ ಒಂದು ದಿವಸ ತಾಯಿಮನೆಗೆ ಬರಬೇಕೆಂದು ಆಸೆಯಾಗುವುದಿಲ್ಲವೇ? ಅವಳನ್ನು ವರ್ಷವೆಲ್ಲಾ ಅಲ್ಲೇ ಕಟ್ಟಿ ಹಾಕುವುದು. ಒಂದು ದಿವಸ ತಾಯಿಮನೆಗೆ ಬಂದರೆ, ಬೆನ್ನಹಿಂದೆಯೇ ಬರುತ್ತಾನೆ ಗಂಡ ಪಾಪ! ಹೆಂಡತಿಯ ಮುಖ ಕಾಣದೆ ದಿನ ಕಳೆಯುತ್ತದೆಯೇ?

ಕನಕ—ಸಾಲದಿದ್ದುದಕ್ಕೆ, ಅದೂ ಒಂದು ನಿಜ ಅಕ್ಕ, ಹದಿನಾರು ವರುಷದಲ್ಲಿ ಎರಡು ಬಾಣಂತಿತನ ಆಯಿತು. ಒಂದು ಕೈಗೆ ಬರಲಿಲ್ಲ. ಒಂದು ಬಂದದ್ದೂ ಇಲ್ಲದ ಹಾಗೆ . . ಹೋಗಲಿ, ಅದೆಲ್ಲ ಮಾತನಾಡಿ ಮನಸ್ಸು ಕಲ್ಲಾಬಿಲ್ಲಿ ಮಾಡಿ ಕೊಳ್ಳುವುದು ಯಾಕೆ. ಬಾ, ನೀರಿಗೆ ಹೋಗುವಾ.

ಗೌರ — ಅಯ್ಯೋ! ಸಂಸಾರ ಅಂದರೆ ಸಂಸಾರ, ಕನಕ. ಕಾಲಗತಿ ಬದಲಾಯಿತು. ಇದು ರಾಮಾಯಣವೂ ಅಲ್ಲ,

ಮಹಾಭಾರತವೂ ಅಲ್ಲ ಒಂದೊಂದೇ ನೆನೆದರೆ ಕಣ್ಣೀರು ಬರುತ್ತೆ. ನಿನಗೆ ಕನಕ, ನನ್ನನ್ನು ಕಂಡರೆ ಹೇಗೆ ಅನಿಸುತ್ತದೆ?

ಕನಕ — ಹಾಗೆಂದರೇನು ಅಜ್ಜಿ?

ಗೌರ — ನಾನು ಸಣ್ಣದಿರುವಾಗ ಹೇಗಿದ್ದಿರಬಹುದು? ಈ ಹಾಳು ಸೀರೆ ತೊಡುವ ಮೊದಲು ಹೇಗಿದ್ದಿರಬಹುದು ಎಂದು ಅನಿಸುತ್ತದೆ?

ವನಜ — ಗೌರಜ್ಜಿ, ನಿನ್ನ ವಿಷಯ ಕನಕ, ಈ ವರೆಗೆ ಒಂದು ಕೆಟ್ಟದ್ದು ಅಂದವಳಲ್ಲ. ಏನೋ ತಾರಿಣಿ, ನಳಿನಿಯರ ಸುದ್ದಿ ಆಡಿದೆನೆಂದು ಹಾಗೆನ್ನುತ್ತೀಯಾ? ನಿನ್ನ ಮೊಮ್ಮ ಗಳ ಸುದ್ದಿ ಹಾಗೆ ಅಂದಿರಬಹುದು ಅನ್ನುತ್ತೀಯಾ! ನಿನ್ನ ಸುದ್ದಿಯನ್ನೂ ಹೇಳಿರಬಹುದು ಎಂದು ಯೋಚಿಸುತ್ತೀಯಾ?

ಕನಕ — ಇಲ್ಲ ಅಜ್ಜಿ, ಹಾಗೆ ಅಂದಿದ್ದರೆ ನನ್ನ ಬಾಯಲ್ಲಿ ಹುಳು ಸುರಿಯಬೇಕು.

ಗೌರ — ಅಯ್ಯೋ, ಅಯ್ಯೋ! ಹಾಗೆಲ್ಲ ಕೆಟ್ಟ ಮಾತು ಆಡಬೇಡ. ನಾನು ನೀನು ಹೇಳಿದ್ದನ್ನು ಎಣಿಸಿದವಳೇ ಅಲ್ಲ ನನ್ನ ಸುದ್ದಿಯನ್ನು ಹೇಳುವ ಎಂದು ಕೇಳಿದೆ. ಈ ಗೌರಜ್ಜಿ, ಕಂಡವರೆಲ್ಲ ಕಾಲಿಗೆ ಬೀಳುತ್ತಾರಲ್ಲ, ಆ ಗೌರಜ್ಜಿ, ಸಣ್ಣ ದಿರುವಾಗ ಹೇಗಿದ್ದಳು ಎಂದು ಎಣಿಸಿದೆ?

ಕನಕ — ನಮಗೇನು ಗೊತ್ತು ಅಜ್ಜಿ? ನಿನ್ನ ಕಣ್ಣೆಂದೆ ಹುಟ್ಟದವರು ನಾವು ನಿನ್ನ ಯೋಗ್ಯತೆ ನಮಗೆ ಬಂದೀತೆ? ಅರುಂಧತಿ, ಶಬರಿ ಹಾಗೆ ನೀನು ನಮ್ಮಂತಹ ಪಾಪಿಗಳ ಜತೆ ಯಲ್ಲಿ ಇದ್ದೀಯಾ.

ನಿನ್ನಂತಹ ಪುಣ್ಯಾತ್ಗಿತ್ತಿಯ ಆಶೀರ್ವಾದವನ್ನು ಪಡೆದರೆ, ಕಾಶಿಯೂ ಬೇಡ, ರಾಮೇಶ್ವರವೂ ಬೇಡ!

ಗೌರ—ಹೌದಲ್ಲ. ಅಂಥ ಅರುಂಧತಿ, ಶಬರಿಯಂತಿರುವ ನಾನು, ಆಗ ಹೇಗೆ ಇದ್ದೆ ಎಂದು ತಾನಾಗಿ ಹೇಳಿದರೆ ಒಂದು ರೀತಿಯ ಚಂದ ಕಾಣಲಿಕ್ಕಿಲ್ಲವೇ!

(ಅಲ್ಲಿಗೆ ನಾಗು ಬರುವಳು.)

ನಾಗು—ಅಜ್ಜಿ, ಕೊಡವನ್ನು ಕೊಡು, ಮನೆಗೆ ಯಾರೋ ಬಂದಿದ್ದಾರೆ; ಒಳಗೆ ಕುಡಿಯುವ ನೀರಿಲ್ಲ.

ಗೌರ- ಈಗ ತರುತ್ತೇನೆ. ನೀನು ಮನೆಗೆ ಹೋಗು ಮಗು. ಬಿಸಿಲು.

ನಾಗು -ಇದೆಂಥ ಬಿಸಿಲು? ನೀನು ಕೊಡವನ್ನು ಕೊಡು. ನಾನು ನೀರನ್ನು ತೆಗೆದುಕೊಂಡು ಹೋಗುತ್ತೇನೆ.

(ಕೊಡವನ್ನು ಒಯ್ದು ಓಡುವಳು.)

ಗೌರ—ನನ್ನ ನಾಗು ಅಂದರೆ ಒಂದು ರತ್ನ!

ವನಜ-ಹೌದಂತೇನೆ. ಅವಳು ಇಂಥ ಒಳ್ಳೆಯ ಹುಡುಗಿ ಎಂದು ನನಗೆ ತಿಳಿದಿರಲಿಲ್ಲ.

ಕನಕ—ಇಂಗ್ಲಿಷ್‌ಗಿಂಗ್ಲಿಷ್ ಒಂದೂ ಕಾಣುವುದಿಲ್ಲ.

ಗೌರ—ಅದು ಹಾಳಾಗಲಿ, ನನ್ನ ಕಥೆ ಹೇಳುತ್ತೇನೆ.

ನಮ್ಮ ಅಪ್ಪಯ್ಯ ಮಲೆಯೂರು ಪಟೇಲರು. ಪಟೇಲರ ಹೆಸರೆಂದರೆ ಆಗ ಊರಿಗೇ ಆದರವಿತ್ತು. ಅಂಥವರ ಹೊಟ್ಟೆಯಲ್ಲಿ ಹುಟ್ಟಿದವಳು ನಾನು. ಅಪ್ಪ ನನ್ನನ್ನು ಎಂಟು ವರುಷಕ್ಕೆ, ಅಲ್ಲ ಏಳಕ್ಕೆ, ಒಬ್ಬ ಪುಣ್ಯಾತ್ಮನ ಕೈಯಲ್ಲಿ ಹಾಕಿದ.

ಅಂದರೆ ನಾನು ಗಂಡನ ಮನೆಗೆ ಹೋಗಿ ಅಲ್ಲಿ ಇರುವಾಗ 16 ವರುಷ ಆಗಿತ್ತು ಅನ್ನಿ. ಸೆರೆದ ಬಳಿಕ ಅಲ್ಲೇ ವಾಸ! ಮನೆಗೆ ಬರುವ ಆಸೆಯಾದರೆ ಕದ್ದೇ ಬರಬೇಕು. ಹೋದ ಮೇಲೆ ಹುಣಿಸೆ ಅಡರಿ(Twig)ನ ಸೇವೆ ಸಹಿಸಬೇಕು.

ಏನು ಸುಖ ಅನುಭವಿಸಿದೆ! ಕೊನೆಗೆ ತಾಳುವುದಕ್ಕಾಗದೆ ಒಂದು ದಿವಸ "ಬಾವಿಗೆ ಹಾರಿದೆ"

ಕನಕ—ಅಯ್ಯೊ, ಅಂಥ ಪಾಪಿ ಯಾರಪ್ಪ!

ಗೌರ—ಪಾಪ, ಅವನು ಪುಣ್ಯಾತ್ಮನೇ ಕನಕ. ನಾನು ಅನ್ನುತಿದ್ದೆ: "ನನ್ನ ಹಿಂದಿನ ಜನ್ಮದ ಕಷ್ಟ, ಯಾರೇನು ಮಾಡುವುದು" ಎಂದು. ಇತ್ತಲಾಗಿ ನಮ್ಮ ಅಪ್ಪ ತೀರಿಕೊಂಡನು. ನನಗೆ ಆಗ ಏನು 20 ವರ್ಷವೋ ಏನೋ. ಕ್ರಿಯೆಗೆ ಮನೆಗೆ ಬರಲು ಬಿಡಲಿಲ್ಲ! ಅಪ್ಪ ತೀರಿದ ಮೇಲೆ, ನಿತ್ಯ ನನಗೆ ಹರಿವೆ ಮುಡಿಯೇ! ಏನು ಗಂಡನ ಸೇವೆ ಮಾಡಿದರೂ ಕಡಿಮೆ.

ಕೊನೆಗೆ ಒಂದು ದಿವಸ ಸಿಟ್ಟಾಗಿ, "ನಿನ್ನನ್ನು ಬಾಳಿಸಿಕೊಳ್ಳುವುದಕ್ಕಿಂತ, ಬಸ್ರೂರು ನಾಯಕಸಾನಿ ಬಾಳಿಸಬಹುದು" ಅಂದರು.

ನನಗೆ ತಡೆಯಲಾರದ ಕೋಪಬಂತು "ಯಾರಿಗೆ ಈ ಹೆದರಿಕೆ? ನಾಯಕಸಾನಿ ಸಿಕ್ಕಿದ ಮೇಲೆ ನೀವು ನನ್ನನ್ನು ಬಿಡುವವರು. ನಾನು ಈಗಲೇ ನಿಮ್ಮನ್ನು ಬಿಡುತ್ತೇನೆ! ನನ್ನ ಮರ್ಯಾದೆ ನಿಮಗೂ ಇಲ್ಲ; ನಿಮ್ಮದು ನನಗೇನು" ಅಂದೆ.

ಕನಕ, ನಿನ್ನ ಅರುಂಧತಿಗೆ ರಾಮಾಯಣ ಮಹಾ

ಭಾರತದ ಕಥೆ ಗೊತ್ತಿತ್ತು. ಅವಳ ಗಂಡನಿಗೆ ಈ ಒಬ್ಬಳು ಹೆಂಡತಿ ಸಾಲದೆಂಬುದೂ ಗೊತ್ತಿತ್ತು. ಆದರೇನಕ್ಕ, ಅನುಭವಿಸುವ ಗಳಿಗೆ ಬಂದರೆ ಅದಕ್ಕೊಂದು ಮಿತಿ ಬೇಕು.

ನೋಡು, ಆ ಪುಣ್ಯಾತ್ಮ ತೀರಿದ ದಿವಸ, ಒಂದು ಥಾಲಿ ಹಾಲನ್ನು ಅವರ ಹೆಣದ ಮುಂದೆ ಕೂತು ಕುಡಿದಿದ್ದೇನೆ! ಈಗ ನನ್ನ ಕೆಲಸ ಸ್ಮರಿಸಿ ನನಗೆ ನಾಚಿಕೆಯಾಗುತ್ತೆ . . . ಆದರೆ ಅವರಿಗಾಗಿ ಈ ವರೆಗೆ ನಾನು ಪಶ್ಚಾತ್ತಾಪ ಪಡಲಿಲ್ಲ!

ಕನಕ — ಗೌರಜ್ಜಿ ಚೇಷ್ಟೆಗೆ ಏನೇನೊ ಕಥೆ ಹೇಳುತ್ತೆ.

ಗೌರ — ಕಥೆಯಲ್ಲ ಕನಕ. ರಾಮನಂಥ ಗಂಡ ಇದ್ದರೆ ಸೀತೆಯಂಥ ಹೆಂಡತಿ. ಗಂಡ ರಾವಣನಾಗಿದ್ದೂ, ಹೆಂಡತಿ ಸೀತೆಯಾಗಿರಬೇಕೆಂದರೆ . . . .

ವನಜ — (ಅಳುತ್ತ)

ಕನಕ — ನೀನೇಕೆ ಅಳುತ್ತೀಯಾ ವನಜಾ!

ವನಜ — ಅಳುವುದು ಪಡೆದು ಬಂದುದಕ್ಕೆ! ರಾಮನನ್ನು ಸೀತೆ ಒಲಿಸಿದಳಂತೆ; ಒಲಿಸಿದರೂ ಕೊನೆಗೆ ಭೂಮಿ ತಾಯೇ ಗತಿ. ಹಾಗಿರುತ್ತಾ ಉಪ್ಪು ಹುಳಿ ತಿನ್ನುವ ನಾನು ನೀನು. . .

ಕನಕ — ಬಿಡಕ್ಕ, ಸುಮ್ಮನಿರು, ಯಾರೋ ಬರುತ್ತಾ ಇದ್ದಾರೆ . . . ಆದ ಕಥೆಯನ್ನು ಹೇಳಿ, ಉಳಿದ ಮಾನ ಕಳೆದುಕೊಳ್ಳುವವರುಂಟೇ?

ಗೌರ — ಮಾನ ಎಲ್ಲಿಂದ ಬಂತು? ಮನುಷ್ಯರಾಗಲಿಕ್ಕೆ ಕಲಿತ ಮೇಲೆ ಮಾನ. (ಅವರು ಅವಸರದಿಂದ ತೆರಳುವರು)

(ಅಲ್ಲಿಗೆ ನಳಿನಿ, ತಾರಿಣಿಯರು ಸೇರಿಗೆ ಬರುವರು )

ತಾರಿಣಿ— ನಳಿನಿ, ನಮ್ಮ ನೆರೆಮನೆ ಕನಕಮ್ಮನನ್ನು ನೋಡಿದಿಯೋನೆ?

ನಳಿನಿ — ಅವಳನ್ನು ಏನು ನೋಡುವುದು? ರಾಮಾಯಣದ ಕಥೆಯೆಲ್ಲ ನೆನಪಿಗೆ ಬರುತ್ತದೆ. ಶೂರ್ಪನಖಿಯು ಹಾಗೆ, ಕುಂಕುಮ ಅಗಿಸಿನದ ಮುದ್ದೆಯಾಗಿ ಕಾಣಿಸುತ್ತಾಳೆ.

ತಾರಿಣಿ— ನೀನು ಅವಳ ಸಿಂಗಾರದ ಸುದ್ದಿ ಹೇಳುತ್ತೀ. ನಾನು ಮಡಿ ಮೈಲಿಗೆಯ ಕತೆಯನ್ನು ಹೇಳುತಿದ್ದೇನೆ. —ಗಿಣಿ ಅನ್ನುತಿದ್ದಳು: ಅವಳಿಗೆ ದಿನಕ್ಕೆ ಹತ್ತು ಸಾರಿಯಾದರೂ ಸ್ನಾನವಾಗಬೇಕಂತೆ. ಮಡಿ ಮಡಿಯೆಂದು ಮಿಂದು ಮೈಚರ್ಮವೆಲ್ಲ ಹಾರಿಹೋಗಿದೆಯಂತೆ!

ಮೊನ್ನೆ ದಿವಸ ಅಷ್ಟೆ ಶೀತ ನೆಗಡಿಯಾಗಿ, ಈಗಲೋ ಇನ್ನೊಂದು ಗಳಿಗೆಯೋ ಎಂದು ಬಿದ್ದಿದ್ದಳಂತೆ. ಯಾರೋ ಅಂದರಂತೆ: "ಕನಕಾ, ಇವತ್ತಾದರೂ ಸ್ನಾನ ಬೇಡ. ಸುಮ್ಮನೆ ವಿಪರೀತವಾಗಿ . . . . ನಿಮೂನಿ ಗಿಮೂನಿ.

ನಳಿನಿ — ನಿಮೂನಿ! ಹೋ ನಿಮೋನಿಯಾ! ಈ ಹಳ್ಳಿಯವರೊಂದು ಇಂಗ್ಲಿಷನ್ನು ಮರ್ಡರ್ ಮಾಡುತ್ತಾರೆ! ಹೂಂ, ಮುಂದೆ?

ತಾರಿಣಿ— ಮುಂದೇನು? ಅವಳು ತಣ್ಣೀರಲ್ಲಿ ಮುಳುಗುವುದನ್ನು ಬಿಡಲಿಲ್ಲ ಆ ಮೇಲೆ ಒಂದು ತಿಂಗಳು ಜ್ವರವೂ ಬಿಡಲಿಲ್ಲ! ಈ ಗೊಡ್ಡುಗಳಿಗೆ ಬ್ರೈನ್ ಎಂಬ ಪದಾರ್ಥ ಗೋಚರಕ್ಕೆ ಯಾವಾಗ ಸಿಗುವುದೋ . . . .

ನಳಿನಿ—ಬ್ರೈನ್! ಬ್ರೈನ್ ಯಾಕೆ ನಮ್ಮ ಪ್ರಾಚೀನ ಮಹಿಳೆಯರಿಗೆ; ಮುತ್ತೈದೆತನಕ್ಕೆ ಬ್ರೈನು ಅಂದರೆ ಅನಾವಶ್ಯಕ, ಅಲ್ಲದೆ ಪಾತಿವ್ರತ್ಯಕ್ಕೂ ಬ್ರೈನಿಗೂ ಎಣ್ಣೆ ಸೀಗೆ!

ತಾರಿಣಿ—ಪಾತಿವ್ರತ್ಯ (ನಗುವಳು) ಅದಕ್ಕಿಂತ ಚೆನ್ನಾಗಿದೆ ನಿನ್ನ "ಮುತ್ತೈದೆ ಶಬ್ದ" (ನಗುವಳು) ಪಾತಿವ್ರತ್ಯ, ಮುತ್ತೈದೆ— ಪುಣ್ಯಾತ್ಗಿತ್ತಿ, ಬೆಂಡೋಲೆ. . . . ಈ ಹುಚ್ಚು ಜನರಿಗೆ ಸರಿಯಾದ ಹುಚ್ಚು ಶಬ್ದಗಳು.

ಅಯ್ಯೋ— ಈ— ಗಿಣಿ ಯಾವಾಗ ಬರುತ್ತಾಳೆಯೋ. ಬಂದರೆ ಒಂದು ಅರ್ಧ ಘಂಟೆ ಹರಟೆಯಾದರೂ ಹೊಡೆಯಬಹುದಿತ್ತು.

ನಳಿನಿ— ಹರಟೆಯೋ! ನೀರಿನ ಕೊಡ ಕೈಯಲ್ಲಿ ಹಿಡಿದದ್ದು ಮರೆತೇ ಹೋಯಿತೇ?

ತಾರಿಣಿ— ನೀರನ್ನು ನೀನು ಬೇಕಾದರೆ ಹೊರು. ನಾನು ಕೊಡ ತಂದದ್ದು ಚಂದಕ್ಕೆ. ಸುಮ್ಮನೆ ಈ ಊರಿನ ಮಹಾ ಮುತ್ತೈದೆಯರಿಂದ ಮಂಗಳಾರತಿ ಮಾಡಿಸಿಕೊಳ್ಳುವುದೇಕೆ ಎಂದು. ಬರಿ ಕೈಯಿಂದ ಹೊರಹೊರಟರೆ ಸಾಕು, ಅವರಿಗೆ ಚಳಿಜ್ವರ ಶುರುವಾಗುತ್ತೆ.

ನಳಿನಿ—ಶುರುವಾಗಲಿ! ಒಂದು ದಿವಸ ನನಗೆ ಎದುರಿಂದೆದುರಿಗೆ, ಡಿಬೇಟನಲ್ಲಿ ಗ್ಯಾಸ್ ಹೊಡೆದಂತೆ ಇವರೆಲ್ಲರಿಗೆ ಒಂದು ಲೆಕ್ಚರ್ ದಬಾಯಿಸಬೇಕೆಂದಿದೆ. ನಮ್ಮಮ್ಮ ಒಬ್ಬಳು! ಅವಳಿಗೆ ಈ ಊರವರ ಮಾತು ಕೇಳಿ ತಲೆ

ಕರಡಾಗಿದೆ. ಇಲ್ಲಿನ ಮಹಾಮುತ್ತೈದೆಯರೆಲ್ಲ ನಮ್ಮನ್ನು ನೋಡಿ ರೇಗುತ್ತಿದ್ದಾರಂತೆ!

ತಾರಿಣಿ--ಏನು ಅವರ ಮನೆಯಿಂದ ನಮ್ಮ ಪೌಡರು ಪಪ್ಪು ಸಾಲವಾಗಿ ತಂದೆವೇನು?

(ನಾಗಿಣಿ ಬರುವಳು.)

ನಾಗಿಣಿ—ಕ್ಷಮಿಸು ನಳಿನಿ. ಮನೆಗೆ ಹೋಗಿ ಬಂದೆ. ಅಂದರೆ ನಮ್ಮ ಮನೆಗೆ ಯಾರೋ ಬಂದಿದ್ದರು. ನೀರು ಕೊಟ್ಟು ಬಂದೆ ನಮ್ಮ ಅಜ್ಜಿ ನೀರು ತರುವುದರೊಳಗೆ ಬೆಳಗಾಗುತ್ತೆ . . . . . ಆದರೂ ನೋಡು ತಾರಿಣಿ, ಅಜ್ಜಿಗೆ ಏನು ಎಂಭತ್ತಾದರೂ ಪ್ರಾಯವಿರಬೇಕು. ತನ್ನ ಕೆಲಸ ತಾನು ಮಾಡದೆ ಕುಳಿತ ದಿವಸವಿಲ್ಲ.

ನಳಿನಿ, ಇನ್ನೊಂದು ಮಾತು; ಆಮೇಲೆ ಒಂದು ಗುಟ್ಟು.

ನಳಿನಿ—ಮುತ್ತೈದೆ, ಪುಣ್ಯಾತ್ಗಿತ್ತಿ (ನಗುವಳು).

ತಾರಿಣಿ—(ನಗುವಳು)

ನಾಗಿಣಿ—ಇದೇನಿದು ರೋಗ?

ನಳಿನಿ—ಊಹುಂ, ಏನಿಲ್ಲ. ಕುಂಕುಮ, ಅರಿಸಿನ. ಮುತ್ತೈದೆ--ಇದೆಲ್ಲ ನೆನಪಾಗಿ ನಗುಬಂತು. ನೀನು ಹೇಳುವ ಸುದ್ದಿಯನ್ನೊ . . . . .

ನಾಗಿಣಿ—ಸುದ್ದಿಯೇನಿಲ್ಲ. ನಮ್ಮ ಅಜ್ಜಿಯ ಹುಕುಮು ಆಗಿದೆ ನಿಮ್ಮನ್ನು ಮನೆಗೆ ಮಧ್ಯಾಹ್ನ ಕರೆದುತರಲು.

ನಳಿನಿ—ನಮ್ಮನ್ನೇ? ನಾವು ನಿಮ್ಮ ಮನೆಯನ್ನು ಹೊಕ್ಕರೆ, ಸೆಗಣಿ ನೀರಿನಿಂದ ತೊಳೆಯಬೇಡವೇ?

ನಾಗಿಣಿ — ಯಾಕೆ, ನಾನು ಮನೆಯಲ್ಲಿಲ್ಲವೇ?

ತಾರಿಣಿ — ಸರಿ, ಹಾಗಾದರೆ ಗೌರಜ್ಜಿ ಸುಧಾರಿಸಿದ್ದಾಳೆ.

ನಾಗಿಣಿ — ನಿನಗೆ ಗೌರಜ್ಜಿ ಎಂಥವಳು ಎಂದು ತಿಳಿದಿಲ್ಲ, ಅದಕ್ಕೇನೆ ಬಾ ಎಂದದ್ದು.

ನಳಿನಿ — ಈಗ ಸಾರಂಗ ರಾಗ ಶುರುವಾಗಲಿ.

ನಾಗಿಣಿ — ಏನು ಸಾರಂಗ? . . . . ಇವತ್ತು ನೀವು ಆಡುವ ಮಾತುಗಳೊಂದಕ್ಕೂ ಅರ್ಥವೇ ಇಲ್ಲವಲ್ಲ.

ನಳಿನಿ — ಇವತ್ತೇನು? ನಿನಗೆ ಬುರುಡೆ ಖಾಲಿಯಾದದ್ದರಿಂದ, ಯಾವಾಗಲೂ ಹಾಗೇನೆ. ನಾನು ಹೇಳಿದೆ ಆ ಸಾರಂಗದ ಹಾಡೊಂದು ಇಲ್ಲವೆ — "ನೀರು ತರಲು ಪೋಗುವಾ . . . . ಓ . . . ಓ . . . ಓ ನೀರು ತರಲು ಪೋ ಓ ಓ ಓಗುವಾ" ಎಂಬುದು. ಅದಕ್ಕೇ ನಡೆಯುವಾ ಎಂದೆ.

ನಾಗಿಣಿ — ಹೋ . . . .

ತಾರಿಣಿ - ನೀನು ಈಗಾಗಲೆ ಒಂದು ಕೊಡವನ್ನು ಹೊತ್ತುಕೊಂಡು ಹೋಗಿ ಬಂದೆ. ನಮ್ಮದಿನ್ನೂ ಪ್ರಾರಂಭ. ಮೇರಜೆಯಲ್ಲಿ ಬೇಡಮಿಂಟನ್ ಆಡುವ ಎಂದು ನೆಟ್, ಬೇಟ್ ಎಲ್ಲವನ್ನು ಹಿಡಿದುಕೊಂಡು ಮನೆಗೆ ಬಂದರೆ, ಇಲ್ಲಿನ ಮಹಾಮಹಿಳೆಯರು.

ನಳಿನಿ — ಅಲ್ಲ, ಮುತ್ತೈದೆ ಯಾನೆ ಪುಣ್ಯಾತ್ಗಿತ್ತಿಯರ ಬಾಯಿಯಲ್ಲಿ ಬಚಾಯಿಸುವುದೇ ಕಷ್ಟವಾಗಿದೆ! ಸಾಲದಿದ್ದುದಕ್ಕೆ ನೀರಿನ ಬರಗಾಲ ಬೇರೆ. 'ನೀರು ತರಲು ಪೋಗುವಾ . . . . .'

ನಾಗಿಣಿ— ನನಗೆ ನಿಮ್ಮ ರೀತಿಯೇ ತಿಳಿಯುವುದಿಲ್ಲ. ಹೆಂಗಸಾಗಿ ಹುಟ್ಟಿ ನೀರು ಮುಟ್ಟದೇನೆ ದಿವಸ ಸಾಗುವು ದಂತೇನು?

ತಾರಿಣಿ— ಭೇಷ್, ಇನ್ನೊಬ್ಬಳು ಮಹಾ ಪತಿವ್ರತೆ! ಇಲ್ಲ, ದಯವಿಟ್ಟು ಕ್ಷಮಿಸು! ಕ್ಷಮಿಸು ನನ್ನ ಗಿಣಿ, ಏನೋ ಹಿಂದು ಮುಂದೆ ಯೋಚಿಸದೆ ಮಾತಾಡಿಬಿಟ್ಟೆ.

ನಾಗಿಣಿ— ಅದೇನು ಮಾಡಲಿಕ್ಕೆ ಬರುತ್ತದೆ? ನನ್ನ ದುರ್ದೈವ.

ತಾರಿಣಿ— ಏನು ದುರ್ದೈವ? ನಾಗಿಣಿ, ನೀನು ಈ ಅಜ್ಜಿಯರ ಮಾತನ್ನು ಕೇಳಬೇಡ! ಅವುಗಳು ನಾಳೆ ಕಣ್ಮುಚ್ಚುತ್ತವೆ. ಸಾಯುವ ತನಕ ಅಳಬೇಕೆಂದು ಬ್ರಹ್ಮ ನಿನ್ನ ಹಣೆಯ ಮೇಲೆ ಬರೆದಿದ್ದರೆ, ಅಂಥ ಬ್ರಹ್ಮನ ಹಣೆಯ ಮೇಲೆ ನಾನು ಬದಲು ಬರೆಯುತ್ತೇನೆ.

ನಿನಗೆ ಗೊತ್ತು: ನಮ್ಮ ವಿಶ್ವನಾಥ ನಿನ್ನನ್ನು ಪ್ರೀತಿಸು ತ್ತಾನೆಂದು. ಯಾಕೆ ಅವನಿಗೆ ಒಪ್ಪಿಗೆ ಕೊಡಬಾರದು. ಈ ಅಜ್ಜಿಗಳಿಗೆ ತಿಳಿಯುವುದೇ ಬೇಡ!

ನಳಿನಿ— ವಿಶ್ವನಾಥ ನಿಜವಾಗಿಯೂ ಫ್ರಾನ್ ಜಂಟ್ಲ್ ಮನ್.

ನಾಗಿಣಿ— ನಾನು ಅಜ್ಜಿಯೊಡನೆ ಕೇಳುವ ಎಂದು ಆಸೆ ಮಾಡಿದ್ದೆ.

ತಾರಿಣಿ— ಅಜ್ಜಿಯ ಹತ್ತಿರವೇ! ಹಾಂ, ಈ ಮುದಿ ಗೊಡ್ಡುಗಳು ಎಂದಾದರೂ ಒಡಂಬಟ್ಟಾವೇ!

ನಾಗಿಣಿ – ನಿನಗೆ ನನ್ನ ಅಜ್ಜಿಯ ವಿಚಾರ ತಿಳಿಯದು, ತಾರಿಣಿ. ಆಕೆಯೆಂದರೆ ಒಂದು ದೇವರು. ಆದರೇನು ಮಾಡುವುದು, ನನಗೇ ಬಾಯಿಬಾರದೆ ಕುಳಿತಿದ್ದೇನೆ!

ತಾರಿಣಿ – ಧರ್ಮಶಾಸ್ತ್ರವೇ?

ನಾಗಿಣಿ – ಧರ್ಮಶಾಸ್ತ್ರ ನನಗೇಕೆ? ಬದುಕನ್ನು ಹಾಳುಮಾಡುವ ಶಾಸ್ತ್ರಗಳೆಲ್ಲ ಮಾಡಿದವರಿಗೇನೆ ಇರಲಿ!

ತಾರಿಣಿ – ಹಾಗಾದರೆ ನಾನು ನಿನ್ನ ಪರವಾಗಿ ವಕಾಲತ್ತು ವಹಿಸಲೇ! ನಿನ್ನ ಅಜ್ಜಿ ಬೈದರೆ ನನ್ನನ್ನು ಬೈಯಲಿ. ನಾನು ಕಿವಿಯಲ್ಲಿ ಪ್ರಸ್ತಾಪಿಸುತ್ತೇನೆ

ನಾಗಿಣಿ – ಸ್ವಲ್ಪ ಮೆಲ್ಲಗೆ ಮಾತನಾಡೇ. ನಮ್ಮ ಊರಿನ ಮುತ್ತೈದೆಯರ ಕಿವಿ ಮಾತ್ರ ಬಲು ಚುರುಕೆಂದು ತಿಳಿಯದೇ?

ತಾರಿಣಿ — ಅವುಗಳು ಕೇಳಿ ಏನು ಮಾಡಿಯಾವು?

ನಾಗಿಣಿ — ಏನೂ ಇಲ್ಲದೆ ಟೀಕೆಮಾಡುವ ಅವರು ನೆಪ ಸಿಕ್ಕಿದರೆ ಬಿಡುತ್ತಾರೆಯೇ?

ನಾಗಿಣಿ – ಏನೋ ಅಮ್ಮ, ನನಗೆ ನನ್ನ ಬಾಳ್ವೆಯ ಮೇಲಿನ ಎಲ್ಲಾ ವಿಶ್ವಾಸ ಹೋಗಿದೆ.

ತಾರಿಣಿ – ಹಾಗಾದರೆ ಉಳಿದವರ ಮೇಲಿನ ವಿಶ್ವಾಸವನ್ನು ಹಾಗೆಯೇ ತೇಲಿಸಿಬಿಡು.

ನೋಡು — ಗಿಣಿ, ನೀನು ವ್ಯಥೆಪಡಲಿಕ್ಕೇನೂ ಕಾರಣವಿಲ್ಲ. ನಮ್ಮ ಅಕ್ಕನಾದರೆ ಸರಿ. ಅವಳಿಗೆ ಗಂಡನಿದ್ದು ಸತ್ತಂತಾಯಿತು. ಎರಡನೇ ಅಧಿಕಾರವೂ ಇಲ್ಲ ಅಂಥ

ಪ್ರಸಂಗದಲ್ಲಿ, ಮನಸ್ಸಿಗೆ ಬಂದವರೊಡನೆ ಯಾಕೆ ಬಾಳ್ವೆ ಮಾಡಬಾರದು?

ನಾಗಿಣಿ – ಹಾಗೆಲ್ಲ ಕೊಳಕು ಮಾತಾಡಬೇಡ!

ತಾರಿಣಿ – ಕೊಳಕು ಮಾತೇನು? ನಮ್ಮ ಭಾವ – ಈಗ ನಳಿನಿಯನ್ನು ಹಳ್ಳಕ್ಕೆ ತಳ್ಳಿ ಸನ್ಯಾಸ ತೆಗೆದುಕೊಂಡಿದ್ದಾನೇನು?

ನಿಜಕ್ಕೂ ನನಗೆ ಒಂದೊಂದು ಸಾರಿ ಹೀಗೆನಿಸುತ್ತೆ: ಏನಾದರೂ ಉಪಾಯಮಾಡಿ ಅವನನ್ನು ನಮ್ಮ ಮನೆಗೆ ಕರೆಯಿಸಿಕೊಂಡು, ಅನಂತರ ಕಂಭಕ್ಕೆ ಬಿಗಿದು, ಚಾಟಿಯಿಂದ ಬರೆ ಎಳೆಯಿಸಬೇಕು ಎಂದು!

ಸರಿಯಾಗಿ ಬೆನ್ನು ಬಾಸುಂಡೆ ಬರುವ ಹಾಗೆ ಕಾಯಿಸಿದರೆ, ಹೆಂಗಸರಿಗೆ ಮಾನಕೊಡುವುದು ಹೇಗೆ ಅಂತ ಹೊಳೆದೀತು. ಈ ಹೆಣ್ಣುಮಕ್ಕಳ ಕುಲ ಸೆಗಣಿಯಾದುದಕ್ಕೇನೆ ಸಿಕ್ಕಿದವರು ಫುಟಬಾಲ್‌ನಂತೆ ತುಳಿಯುತ್ತಿರುವುದು.

ನಾಗಿಣಿ – ನೋಡುವ, ನಿನ್ನ ಸರದಿ ಬರುತ್ತದಲ್ಲ! ಏನೇನು ಮಾಡುತ್ತೀ ನೋಡುವ!

ತಾರಿಣಿ–ನನ್ನ ಸರದಿ ನಾನೇ ತರುವವಳು, ಬಿಡುವವಳು! ನಾನೆನ್ನುತ್ತೇನೆ: ನಾನು ನಮ್ಮ "ಚಿದಂಬರನನ್ನು ಬಿಟ್ಟು ಇನ್ನೊಬ್ಬನನ್ನು ಮದುವೆಯಾಗಲೊಲ್ಲೆ!"

ನಳಿನಿ – ಸ್ವಲ್ಪ ಬಾಯಿ ಮೆಲ್ಲಗಾಗಲಿ! ಕನಕಮ್ಮನನ್ನು ಕಾಣುವುದಿಲ್ಲವೆ!

ತಾರಿಣಿ— ಓಹೋ! ದಿಸ್ ಕನಕಮ್ಮ್ ಡೈಡೋಂಟ್ ಕೇರ್ ಎ ಫಿಗ್.

ಕನಕ—(ಆ) ಅಯ್ಯೋ, ಅಯ್ಯೋ! ಇವು ನಾವು ಎಣಿಸಿದ್ದಕ್ಕಿಂತ ದೊಡ್ಡ ಸೂಟಿಗಳು! ಅಲ್ಲದಿದ್ದರೆ ಹೆಣ್ಣು ಮಕ್ಕಳು ಆಡುವ ಮಾತುಗಳೇನು ಇವು; ಏ ಪರಮಾತ್ಮ! ಗಂಡನನ್ನು ಬಿಗಿಯುವುದಂತೆ! ಚಿದಂಬರನನ್ನು ಮದುವೆಯಾಗುವುದಂತೆ!

ಅಯ್ಯೋ ಗೌರಜ್ಜಿ, ನಿನಗೆ ವರ್ಷವಾದ್ದು ಮಣ್ಣಿಗಾಯಿತು. ನೀನು ನಾಗೂಗೆ ಇಂಗ್ಲಿಷ್ ಮಾಡಿ, ಎರಡು ಸೂಟಿಗಳ ಜತೆಗೆ ಇನ್ನೊಂದನ್ನು ಸೇರಿಸಿದೆ! ಇಲ್ಲ, ಇವತ್ತು ದ್ವಾದಶಿ ಪಾರಣೆ ತಡವಾದರೂ ಚಿಂತಿಲ್ಲ. ಈ ಮೂಕಾಂಬಿಕೆಯರ ಬಾಯಿಯಿಂದ ಬಿದ್ದ ಮುತ್ತುಗಳನ್ನೆಲ್ಲ ಕೂಡಿಸಿ ಸರಮಾಡಿ ಗೌರಜ್ಜಿ ಕೊರಳಿಗೆ ಹಾಕಬೇಕು.

ನನಗೇಕೋ ಗೌರಜ್ಜಿ ಮಾತು ಒಂದು ಸಾರಿ ಹೌದು ಎಂದೆನಿತು. ನಾವು ಸಣ್ಣವರಿರುವಾಗ ಎಷ್ಟು ಕೆಟ್ಟವರಾಗಿದ್ದರೂ ಇಷ್ಟು ಆಗಿರಲಿಕ್ಕಿಲ್ಲ. (ತೆರಳುವಳು.)

ತಾರಿಣಿ — ಹಾ ! ನಮ್ಮ ನ್ಯೂಸ್‌ಪೇಪರ್ ಕನಕಮ್ಮ್ is gone! ನಿಜಕ್ಕೂ ನೋಡೆ, ಅದೊಂದು ಚಿತ್ರದಲ್ಲಿ ಶಬರಿಯನ್ನು ಬಿಡಿಸಿದ್ದರಲ್ಲ? ಹಾಗೆ ಕಾಣುತ್ತಾಳೆ!

ನಾಗಿಣಿ— ಸುಮ್ಮನೆ ಯಾಕವಳಿಗೆ ಬೈಯುತ್ತೀಯಾ? ಪಾಪ! ಒಳ್ಳೆಯ ಹೆಂಗಸು. ಏನೋ ಹಳೆ ನಮೂನೆ

ಇಷ್ಟೆ! ಯಾರ ಮನೆಯಲ್ಲೇ ಆಗಲಿ, ಒಂದು ಸಾವು, ಬೇನೆ, ಮದುವೆ—ಏನಾದರೂ ಸರಿಯೇ,ಹೋಗಿ ಬೆಳಗಿಂದ ಸಂಜೆಯ ತನಕ ಮೈಮುರಿದು ಕೆಲಸಗಳನ್ನು ಮಾಡಿಕೊಟ್ಟು ಬರು ತ್ತಾಳೆ! ಒಳ್ಳೇ ಹೆಂಗಸು.

ತಾರಿಣಿ— ಕತ್ತೆಯ ಹಾಗೆ ಕೆಲಸಮಾಡಿದರೆ ಸರಿಯೇ? ಬ್ರೈನಿರಬೇಡವೇ!

ನಾಗಿಣಿ— ಏನು ಬ್ರೈನು? ನಿನ್ನ ಅಕ್ಕನಿಗೆ ಬ್ರೈನಿಲ್ಲವೇ! ಆದದ್ದೇನು? ನಿನಗೂ ಇದೆ, ತಲೆತುಂಬ ಮಿದುಳು! ಇವತ್ತು ಅದರ ತೂಕ ತಿಳಿಯುತ್ತದೆ!

ತಾರಿಣಿ–ಏನು ತೂಕ ತಿಳಿಯುವುದು? ಅದೂ ಇವತ್ತು!

ನಾಗಿಣಿ – ನೀನು ನಮ್ಮಲ್ಲಿಗೆ ಮಧ್ಯಾಹ್ನಕ್ಕೆ ಬರುತ್ತೀ ಎಂದು ಮಾತುಕೊಟ್ಟರೆ ಇನ್ನೊಂದು ಹೊಸ ಸುದ್ದಿಯನ್ನು ನಿನಗೆ ಹೇಳುತ್ತೇನೆ.

ತಾರಿಣಿ — ಹೊಸ ಸುದ್ದಿ? ಈ ಹಳ್ಳಿಗೆ ಬಂದರೆ ಎಲ್ಲರೂ ಸುದ್ದಿಗಾರರೇ, ಎಲ್ಲರೂ ನ್ಯೂಸ್‌ಪೇಪರೇ!

ನಾಗಿಣಿ — ಹಾಗಾದರೆ ನನಗೇನು?

ನಳಿನಿ – ನೀನು ಹೇಳು ನಾಗಿಣಿ. ನಾನು ಅವಳನ್ನು ಕರೆದು ತರುತ್ತೇನೆ.

ನಾಗಿಣಿ – ನಮ್ಮ ಮನೆಗೆ ಇವತ್ತು ಯಾರೋ ಬಂದಿ ದ್ದಾರೆ?

ತಾರಿಣಿ — ನಮ್ಮ ಕೊಟ್ಟಗೆಗೆ ಇವತ್ತು ಒಂದು ಎಮ್ಮೆ ಬಂದಿದೆ! ಒಂದು ನ್ಯೂಸು ಪುಣ್ಯಾತ್ಗಿತ್ತಿ.

ನಾಗಿಣಿ—ಹಾಗಾದರೆ ನನಗೇನು? ಗುಡ್ ಬ್ಯಾ.

(ಹೊರಡುವಳು.)

ತಾರಿಣಿ—ಅಯ್ಯೋ! ಮೂಗಿನ ತುದಿಯ ಮೇಲಿದೆ ಕೋಪ.

ನಾಗಿಣಿ—ಕೋಪವಾಡದೆ? ನಿನ್ನ ಸಲುವಾಗಿ ಸುದ್ದಿ ತಂದರೆ, ನಿನ್ನನ್ನು ನೋಡಲಿಕ್ಕೆ, ಒಬ್ಬ ಮದುಮಗನ ಸವಾರಿ ಬಂದಿದೆ. ಈಗ ನಮ್ಮಲ್ಲಿ ಬಂದಿಳಿದರಷ್ಟೆ. ದೂರದವರು, ಯಾರೋ ಕಾರವಾರದವರೊ, ಧಾರವಾಡದವರೊ. ಹುಡುಗ ಚೆನ್ನಾಗಿದ್ದಾನೆ. ನಿನ್ನ ಚಿದಂಬರನಿಗಿಂತ ಷೋಕೀ ಜನ!

ನಳಿನಿ—ನಿಜವೇ?

ನಾಗಿಣಿ—ನಿನ್ನಾಣೆ. ನೀವು ಸುಮ್ಮನೆ ನಮ್ಮ ಮನೆಯಿಂದ ಹಾದುಹೋಗಿ. ನಿಜಕ್ಕೂ ತಾರಿಣಿ ಅದೃಷ್ಟಶಾಲಿ!

ತಾರಿಣಿ—ನಾನೇನು ಹುಚ್ಚಿಯೆಂದು ತಿಳಿದೆಯಾ? ಚಿದಂಬರನಿಗೆ ನಾನು ಪ್ರಾಮಿಸ್ ಮಾಡಿದ್ದೇನೆ!

ನಾಗಿಣಿ—ಮನೆಯವರು ಎಲ್ಲಿ ಒಪ್ಪುತ್ತಾರೆಯೋ? ಚಿದಂಬರನಿಗೆ ಸ್ವಲ್ಪ ಕಡಿಮೆ ಜಾತಿಯಲ್ಲವೆ!

ತಾರಿಣಿ—ಮನೆಯವರೂ ಇಲ್ಲ, ಯಾರೂ ಇಲ್ಲ—ಸಿವಿಲ್ ಮೆರೇಜ್.

ನಾಗಿಣಿ—ಎಲ್ಲವನ್ನು ಬಾಯಿಯಲ್ಲಿ ಅನ್ನುವುದು ಸುಲಭ. ಹಾಗಾದರೆ ಈಗ ಬಂದವನನ್ನು ಓಡಿಸುವುದೇ!

ನಳಿನಿ—ಯಾರೆಂದು ತಿಳಿಯುತ್ತದಲ್ಲ; ನಮ್ಮ ಮನೆಗೆ ಬಂದೇ ಬರುತ್ತಾರೆ.

ತಾರಿಣಿ—ಬಂದರೆ ಹಟಕ್ಕೆ ಅರಿಸಿನ ಕುಂಕುಮ ಮುಖಕ್ಕೆ ಸವರಿ ಮುತ್ತೈದೆ ಮಂಡೋದರಿಯ ಹಾಗೆ ಡ್ರೆಸ್ಸ್ ಮಾಡಿ ಒಂದು ಸೀನ್ ಮಾಡುತ್ತೇನೆ! ನನ್ನ ರೂಪ ನೋಡಿಯೇ ಅವನು ದಂಡಕಾರಣ್ಯವನ್ನು ಸೇರಬೇಕು!

ನಾಗಿಣಿ—ನಿನಗೆಲ್ಲ ಅತಿ ಬುದ್ಧಿ ನೋಡು . . .

ತಾರಿಣಿ—ಬುದ್ಧಿಯಿಲ್ಲದೆ ಬಿದ್ದಿರುವುದಕ್ಕಿಂತ, ಅತಿ ಬುದ್ಧಿಯಾಗಿರುವುದು ವಾಸಿ. ನನ್ನ ಗಿಣಿ—ಬಾ 'ನೀರು ತರಲು . . . (ತೆರಳುವಳು)

ಗೌರ—ಅಮ್ಮ, ಒಂದು ಸ್ನಾನ ಮುಗಿಸಿ ಬಟ್ಟೆ ಒಗೆದು ಹೊರಡುವಾಗ ಇಷ್ಟು ಹೊತ್ತಾಯಿತು! ವನಜಾಕ್ಷಿ ಹೋಗಿಯಾಯಿತು. ನಮ್ಮ ಕನಕನಿಗೆ ಇಷ್ಟರಲ್ಲೇ ನೂರು ಸ್ನಾನವಾಗಿರಬಹುದು. ಅವಳಂಥ ಚುರುಕಿನ ಹೆಂಗಸನ್ನು ನಾನು ಕಾಣಲಿಲ್ಲ . . .

ಅದೇ—ಇದೇನೆ ಕನಕ, ಇನ್ನೊಂದು ಸಾರಿ ನೀರಿಗೆ ಬಂದೆಯಾ? ನೀರು ಮೈಲಿಗೆಯಾಯಿತೆ?

ಕನಕ—ನೀರು ಬೇಡ . . . ಯಾಕೋ ಜೀವಸಂಕಟ ಇಲ್ಲಿ ನಿಂತು . . . (ಮಾತನಾಡುತ್ತ, ಆಡುತ್ತ ಮೂರ್ಛೆ ಹೋಗುವಳು.)

ಗೌರ—ಅಯ್ಯೋ, ಏನೇ ಇದು? ಹಾದಿಯ ಮೇಲೆ ಕುಳಿತಿಯಲ್ಲಾ.

ಕನಕಾ, ಕನಕಾ! ಅಯ್ಯೋ ಪಾಪವೇ! ನಾನು ಪಾಪಿ. ದ್ವಾದಶಿ ಪಾರಣೆಗೆ ಬಿಡದೆ, ಮಾತನಾಡುತ್ತ

ಇವಳನ್ನು ನಿಲ್ಲಿಸಿಕೊಂಡೆ. ಏಕಾದಶಿ ಬಂದರೆ ತೀರ್ಥ ಬಿಟ್ಟು ಇನ್ನು ಒಂದನ್ನು ಮುಟ್ಟುವುದಿಲ್ಲ . . .

ಕನಕ . . . ಕನಕ . . .

ಇದೇನು . . . ಕಡೆಗೂ. ಅಯ್ಯೋ ಯಾರನ್ನು ಕರೆಯಲಪ್ಪ, ನಾಗು . . . ನಾಗೂ (ಅಜ್ಜಿಯ ಕೂಗನ್ನು ಕೇಳಿ ಮೂವರು ಬಾಲೆಯರು ಓಡಿ ಬರುವರು.)

ಗೌರ=ನಾಗೂ, ಬಂದೆಯಾ? ಇವರ್‍ಯಾರು? ಬನ್ನಿಮಕ್ಕಳೆ! ನಮ್ಮ ಕನಕ ಬಿಸಿಲಿಗೆ, ಹಸಿವೆಗೆ ಮೂರ್ಛೆ...ಸ್ವಲ್ಪ ನೀರು.

ತಾರಿಣಿ—ಮೂರ್ಛೆ ಬಂತೇ? ನೀರು ಸ್ವಲ್ಪ ತಂದು..

ನಾಗಿಣಿ – ನೀರು ನಾನು ತರುತ್ತೇನೆ!

ಗೌರ—ನೀನು ಬೇಡ ನಾಗು, ದ್ವಾದಶಿ ಪಾರಣೆ ದಿವಸ! ಮುತ್ತೈದೆ ಕೈಗೆ ನೀರು ಹಾಕದೆ ಊಟಮಾಡು ವವಳಲ್ಲ ಕನಕ, ಇದ್ಯಾರು ತಾರಿ ಅಲ್ಲವೆ! ನಾಗು. ತಾರೀ, ನೀನು ನೀರನ್ನು ತರುತ್ತೀಯಾ ಮಗು? ಪಾಪ, ಒಂದು ಜೀವ ಬದುಕಿಸಿದ ಪುಣ್ಯ ಬರುತ್ತದೆ. (ತಾರಿ ಓಡುವಳು)

ನಳಿನಿ – ಗಾಳಿ ಹಾಕಲೇ? ಅಜ್ಜಿ, ಕನಕಮ್ಮನ್ನ ಈಚೆ ತಂಪಿಗೆ ಮಲಗಿಸುವ!

ಗೌರ ಹೌದು, ಮಲಗಿಸುವ. (ಮಲಗಿಸುವರು)

ತಾರಿಣಿ – (ನೀರು ತೆಗೆದುಕೊಂಡು ಬರುವಳು) ನೀರನ್ನು ತಂದೆ.

ಗೌರ—ಕಣ್ಣಿಗಿಷ್ಟು ನೀರು ಸವರು ಮಗು, ಬಾಯಿಗಿಷ್ಟು ಬಿಡು. ಪಾಪ! ನನ್ನ ಕನಕ ಚಿನ್ನದಂಥಾ ಮುತ್ತೈದೆ!

ನಾಗು, ಕನಕನಿಗೆ ಗಾಳಿ ಬೀಸುತ್ತೀಯಾ? ನಾನು ಓಡಿಹೋಗಿ ಒಂದಿಷ್ಟು ಹಾಲೋ ಪಾಲೋ, ತುಳಿಸಿಯೊ ಗಿಳಿಸಿಯೊ ತರುತ್ತೇನೆ.

ನಾಗಿಣಿ—ನಾನು ತರುತ್ತೇನೆ, ಅಜ್ಜಿ

ಗೌರ–ನಿನಗೆ ಸಿಗಲಿಕ್ಕಿಲ್ಲ. ನೀನು ಅವಳನ್ನು ಗಾಳಿ ಹಾಕಿ ಉಪಚರಿಸಿ. ನಾನು ಕನಕನ ತಮ್ಮನನ್ನು ಕರೆದು ಬರುತ್ತೇನೆ!

(ಎಲ್ಲರೂ ಉಪಚರಿಸುವರು)

ತಾರಿಣಿ—ಕನಕಮ್ಮ, ಕನಕಮ್ಮ . . . . ಏನಾಯಿ ತಂತೆ ಗಿಣಿ?

ನಾಗಿಣಿ—ನಿನ್ನೆ ಉಪವಾಸ. ರಣ ಬಿಸಿಲು, ನೀರು ಹೊರುವುದು, ಇವೆಲ್ಲ ಸೇರಿ ತಲೆ ತಿರುಗಿರಬೇಕು . . . .

ತಾರಿಣಿ—ಪಾಪ! ಒಂದಕ್ಕೆ ಇವಳನ್ನು ನೋಡಿ ನಗು ಬರುತ್ತೆ; ಆದರೆ ಪಾಪ ನಂಬಿಕೊಂಡು ಬಂದ ಮಾರ್ಗ ಬಿಡಬಾರದೆಂಬ ಹಟ ನೋಡಿದರೆ ಮಾತ್ರ . . . .

(ಉಪಚಾರವಾಗುವುದು)

ಕನಕ—ಆಂ, ಯಾರು . . . . ಯಾರು . . .

ತಾರಿಣಿ–ಕನಕಮ್ಮ, ಯಾರಿಲ್ಲ ನಾವು. ನೀವು ಮಾತಾಡಬೇಡಿ. ಗೌರಜ್ಜಿ ಹಾಲು ತರಲಿಕ್ಕೆ ಹೋಗಿದ್ದಾರೆ . . . ಬೇಡ, ಕೂತಿರುವುದು ಬೇಡ . . . ಆಯಾಸ ವಾಗಿದೆ . . .

ಕನಕ—(ಮುರಮುರನೆ ಪಾಕ್ಕಳನ್ನು ನೋಡುವಳು!) ಯಾರು ನೀವೆ! . . . ನಾನು ಮಿಂದು ಬಂದದ್ದು . . .

ತಾರಿಣಿ— ತಪ್ಪಾಯ್ತು ಅಜ್ಜಿ. ಬಿಸಿಲಲ್ಲಿ ರಸ್ತೆ ಮೇಲೆ ಬಿದ್ದದ್ದು ಕಂಡು, ಗೌರಜ್ಜಿ ಕರೆದಳು . . . .

ಕನಕ— ಇಲ್ಲಮ್ಮ, ಕೆಟ್ಟ ಬಾಯಿ ನನ್ನದು. ನೀವು ನನ್ನ ಮಕ್ಕಳಿಗೆ ಸಮ! ಈ ಹಾಳು ಮುದುಕಿಯನ್ನು ಉಪ ಚರಿಸುವ ಬುದ್ಧಿ ಬಂತಲ್ಲ ನಿಮಗೆ!

ಯಾರು? ನಮ್ಮ ತಾರು ಅಲ್ಲವೆ! ನಿಮ್ಮ ಮಾತು ಕೇಳಿ ನಿಮ್ಮನ್ನು ಬೈಯಲಿಕ್ಕೆ ನಿಂತೆ!

ನಾಗಿಣಿ— ಕನಕಮ್ಮ, ಸುಮ್ಮನಿರು . . . ಮಾತಾಡ ಬೇಡ; ಆಯಾಸವಾದೀತು!

ಕನಕ— ಇಲ್ಲ ಮಗು, ಆಯಾಸವಿಲ್ಲ. ಪಾಪ, ನಾನು ನಿಮ್ಮನ್ನು ಕಂಡು ಏನೇನೆಲ್ಲ ಎಣಿಸಿದ್ದೆ. ಅಯ್ಯೊ, ನೀವೂ ನನ್ನ ಹಾಗೆ ಮನುಷ್ಯರು.

ತಾರಿಣಿ— ಇದೇನು, ಬುದ್ಧಿ ಭ್ರಮೆಯೇ? (ಗೌರಜ್ಜಿ ಬರುವಳು) ಹಾಲು ತಂದಿರಾ, ಗೌರಜ್ಜಿ? ಇದೇನು ಕನಕಮ್ಮ ಯದ್ವಾ ತದ್ವಾ ಮಾತಾಡುತ್ತಾಳೆ! ಪಾಪ! ಸ್ವಲ್ಪ ಮಲಗಲಿಕ್ಕೆ ಹೇಳಿ. ಗಾಳಿ ಹಾಕುತ್ತೇವೆ ನಾವು!

ಕನಕ- ಗಾಳಿ ಬೇಡ . . . . ನಿಮ್ಮನ್ನು ಬೈದು.

ತಾರಿಣಿ-- ನಮ್ಮನ್ಯಾಕೆ ಬೈಯುತ್ತೀರಾ ನೀವು? ಸುಳ್ಳು, ಬೈಯಲಿಲ್ಲ ಏನಿಲ್ಲ.

ಗೌರ— ಕನಕ, ಹಾಲು, ತೀರ್ಥ ತಂದಿದ್ದೇನೆ. ಬಾಯಿಗೆ ಹಾಕಿಕೊಳ್ಳುತ್ತೀಯಾ?

ಕನಕ — ಹೌದು, ಹಸಿವು ಸಂಕಟ ಆಗಿತ್ತು. ಅದಕ್ಕೆ ಬಿದ್ದೆನೆಂದು ಕಾಣುತ್ತದೆ.

ನಾಗಿಣಿ—ಹಾಗಾದರೆ ಹಾಲು ತೀರ್ಥಗಳನ್ನು ಕುಡಿಯು ಬಾರದೇ? ಇಲ್ಲಿ ಕೊಡು ಅಜ್ಜಿ (ನಡುಗುವ ಕೈಯಲ್ಲಿ ಕೊಡುವಳು)

ತಾರಿಣಿ — ಇಲ್ಲ, ನಿಮ್ಮ ಕೈ ನಡುಗುತ್ತದೆ. ಅದನ್ನು ಇಲ್ಲಿ ಕೊಡಿ; ನಾನು ಬಾಯಿಗೆ ಹಿಡಿಯುತ್ತೇನೆ!

ಕನಕ — ಬೇಡ ಮಗು, ನಾನು ಮೈಲಿಗೆ!

ಗೌರ — ತೀರ್ಥಕ್ಕೆ ಮಡಿಯೇನು, ಮೈಲಿಗೆಯೇನು— ಕುಡಿ ಕನಕ.

ಕನಕ — ಹೌದು, ತೀರ್ಥ —

ತಾರಿಣಿ — ಬಾಯಿಗೆ ಹಿಡಿಯಲೇ?

ಕನಕ — ಬೇಡ, ನಾನು ಕುಡಿಯುತ್ತೇನೆ!

ತಾರಿಣಿ — ನೀವು ಸುಮ್ಮನಿರಿ, ನಾನು ಕುಡಿಸುತ್ತೇನೆ . .

(ಕುಡಿಸುವಳು; ಕುಡಿಯುತ್ತ)

ಕನಕ — ಇಲ್ಲ, ತಾರು, ಆಗಿನ ಕಾಲಕ್ಕೆ ಅದು ಚಂದ ನಿಮ್ಮ ಕಣ್ಣಿಗೆ ಹೀಗೆಲ್ಲಾ ಕಾಣುತ್ತದೆ . . . . . ಜೀವ ಎಂಬುದೆಲ್ಲಾ ಒಂದೇ.

ತಾರಿಣಿ — (ಹಾಲು ಕುಡಿಸಿ) ಗೌರಜ್ಜಿ, ಇದೇನು? ಕನಕ ಯಾಕೆ ಹೀಗೆ ಮಾತಾಡುತ್ತಾಳೆ? ತಲೆಗೆ ನೀರು ಬಡಿಯಲೇ! ಕಣ್ಣಿಗೆ ಇನ್ನಿಷ್ಟು ನೀರನ್ನು ಸವರಲೇ?

